KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜನವರಿ ೧೩, ೨೦೧೧, (ಪುಷ್ಯ ೨೩, ಶಕ ವರ್ಷ ೧೯೩೨) | ಸಂಚಿಕೆ ೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್.ಎನ್.ಚಾಟೆ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ–I ಸಂ:ಲಾ 229 ಪಿಪಿಇ 81, ದಿನಾಂಕ:24.02.1982,

2) ಸರ್ಕಾರದ ಅಧಿಸೂಚನೆ–II ಸಂ:ಲಾ 206 ಪಿಪಿಇ 87, ದಿನಾಂಕ:23.06.1989,

3) ಸರ್ಕಾರದ ಅಧಿಸೂಚನೆ ಸಂ:ಲಾ 114 ಪಿಪಿಇ 96, ದಿನಾಂಕ:12.06.1996,

4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ: 14.08.2008,

5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ ಸಿಶಾ.1 / 98 (10)/ 2008–09, ದಿನಾಂಕ:29.03.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:24.02.1982ರ ಸರ್ಕಾರದ ಅಧಿಸೂಚನೆಯ– Iರ ಕ್ರ.ಸಂ:(1)ರನ್ವಯ ಶ್ರೀ ಆರ್.ಎನ್.ಚಾಟೆ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ:05.03.1982 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:23.06.1989ರ ಸರ್ಕಾರದ ಅಧಿಸೂಚನೆ– IIರ ಕ್ರ.ಸಂ:20ರನ್ವಯ ಶ್ರೀ ಆರ್.ಎನ್.ಚಾಟೆ ರವರು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ:16.08.1989ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:12.06.1996ರ ಸರ್ಕಾರದ ಅಧಿಸೂಚನೆ ಕ್ರ.ಸಂ:3ರನ್ವಯ ಶ್ರೀ ಆರ್.ಎನ್.ಚಾಟೆ ರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ:04.07.1996ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ:29.03.2010ರ ಪತ್ರದಲ್ಲಿ, ಮೇಲೆ (1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಆರ್.ಎನ್.ಚಾಟೆರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ಪ್ರಸ್ತುತ ₹.18150–26925ರ ವೇತನ ಶ್ರೇಣಿಯ ಗ್ರೂಪ್–ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ:04.07.1996 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಸದರಿಯವರು ಅವರ ಮುಂದಿನ ಹುದ್ದೆಯಾದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆಯಲು ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅರ್ಹರಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ (4)ರಲ್ಲಿ ಓದಲಾದ ದಿನಾಂಕ:14.08.2008ರ ಸರ್ಕಾರದ ಆದೇಶದನ್ವಯ, ₹.19050–27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಪಡೆಯಲು ಅರ್ಹರಿದ್ದು, ದಿನಾಂಕ:01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ:01.08.2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಯನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂ : ಒಇ 121 ಪಿಪಿಇ 2010, ಬೆಂಗಳೂರು, ದಿನಾಂಕ : 18ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್.ಎನ್.ಚಾಟೆ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿರವರಿಗೆ ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ (ವೇತನ ಶ್ರೇಣಿ ₹.18150-26925) ದಿನಾಂಕ:04.07.1996 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ:14.08.2008ರ ಅನುಸಾರ ದಿನಾಂಕ:01.08.2008 ರಿಂದ ಅನ್ವಯಿಸುವಂತೆ ಆಯ್ಕೆ ದರ್ಜೆ ವೇತನ ಶ್ರೇಣಿಯಾದ ₹.19050-27600ನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2438

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಜಮಖಂಡಿ ಕಂದಾಯ ತಾಲ್ಲೂಕಿನಲ್ಲಿ ಹೆಚ್ಚುವರಿಯಾಗಿ ಸೃಜನೆ ಮಾಡಲಾದ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಲಾ 100 ಎಲ್‌ಸಿಎಲ್ 2009 ದಿನಾಂಕ:12-01-10.
2. ಸರ್ಕಾರದ ಪತ್ರ ಸಂಖ್ಯೆ ಲಾ 41 ಎಲ್‌ಸಿಎಲ್ 2010 ದಿನಾಂಕ 08/09-02-2010.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ ಸಂಖ್ಯೆ ಎಡಿಎಂಎನ್ 2829/2010, ದಿನಾಂಕ: 08-06-2010.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂ. GSR 114 (E) ದಿನಾಂಕ: 24-02-2009.
5. ಅಧಿಸೂಚನೆ ಸಂಖ್ಯೆ ಲಾ 61 ಎಲ್‌ಸಿಎಲ್ 2009 ದಿನಾಂಕ: 24-07-2010
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 41 ಎಲ್‌ಸಿಎಲ್ 2010 ದಿನಾಂಕ 29-07-2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 12-01-2010ರ ಸರ್ಕಾರದ ಆದೇಶದಲ್ಲಿ ಬಾಗಲಕೋಟೆ ಜಿಲ್ಲೆ ಜಮಖಂಡಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿತ್ತು.

ಸದರಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಧೀಶರು, ಬಾಗಲಕೋಟೆ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 08/09-02-2010ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 08-06-2010ರ ಪತ್ರದಲ್ಲಿ 12 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6)ರಲ್ಲಿ ಓದಲಾದ ದಿನಾಂಕ: 29-07-2010ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ: 18-08-2010ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನಾ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 41 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 17-09-2010.**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು (1956) ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಶ್ರೀ ಹನಗಂಡಿ ವಿರೂಪಾಕ್ಷಪ್ಪ ಬಸವಂತಪ್ಪ, ವಕೀಲರು, ಹುನ್ನೂರ್ ಅಂಚೆ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಜಮಖಂಡಿ ಕಂದಾಯ ತಾಲ್ಲೂಕಿನಲ್ಲಿ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಗಳು-06 ಇತರೆ ಬಾಬುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ₹.1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ಶಕುಂತಲಾ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 2439

## ಕಂದಾಯ ಸಚಿವಾಲಯ

**ವಿಷಯ :** ದೇವಸ್ಥಾನಗಳು ಮತ್ತು ಇತರ ಧಾರ್ಮಿಕ ಸಂಸ್ಥೆಗಳಿಗೆ ತಸ್ತೀಕು ಮೊತ್ತವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಮುತಬ 2006, ದಿನಾಂಕ: 29.6.2006

2) ಮಾನ್ಯ ಮುಖ್ಯಮಂತ್ರಿಯವರ 2010–11ನೇ ಸಾಲಿನ ಆಯವ್ಯಯ ಭಾಷಣದ ಘೋಷಣೆ

3) ಧಾರ್ಮಿಕದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 2 ಐಎನ್ ಎ/ಸಿಆರ್ 61/07–08/ ದಿ: 8.4.2010

**ಪ್ರಸ್ತಾವನೆ:**

ಕರ್ನಾಟಕ (ಮತೀಯ ಮತ್ತು ಧರ್ಮಾರ್ಥ) ಇನಾಂ ರದ್ದಿಯಾತಿ ಕಾಯಿದೆ 1955 ಮತ್ತು ಕರ್ನಾಟಕ ಹಲವು ಇನಾಂ ರದ್ದಿಯಾತಿ ಕಾಯಿದೆ 1977ರನ್ವಯ ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು ಹೊಂದಿದ್ದ ಇನಾಂ ಜಮೀನುಗಳಿಗೆ ಪರಿಹಾರಾರ್ಥವಾಗಿ ತಸ್ತೀಕ್ ಮೊತ್ತವನ್ನು ನಿಗದಿಪಡಿಸಿ ಪಾವತಿಸಲಾಗುತ್ತಿದ್ದು, ಅದರಂತೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ವಾರ್ಷಿಕವಾಗಿ ₹.5,999/–ಗಳಿಗಿಂತ ಕಡಿಮೆ ತಸ್ತೀಕ್ ನಿಗದಿಯಾಗಿರುವ ಸಂಸ್ಥೆಗಳಿಗೆ ₹.6,000/–ಕ್ಕೆ ಹೆಚ್ಚಿಸಲಾಗಿರುತ್ತದೆ.

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು "ತಸ್ತೀಕ್ ಮೊತ್ತವನ್ನು ಮಾಸಿಕ ₹.600/–ರಿಂದ ₹.1000/–ಕ್ಕೆ ಏರಿಸಲಾಗುವುದು" ಎಂದು ಘೋಷಣೆ ಮಾಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಮುತಬ 2006 ದಿನಾಂಕ 29.6.2006ರನ್ವಯ ವಾರ್ಷಿಕವಾಗಿ ₹.6,000/–ಗಳ ತಸ್ತೀಕ್ ಮೊತ್ತ ಪಡೆಯುತ್ತಿರುವ ಸಂಘಸಂಸ್ಥೆಗಳ ಸಂಖ್ಯೆ: 27,000 ಹಾಗೂ ₹.11,999/–ಕ್ಕಿಂತ ಕಡಿಮೆ ನಿಗಧಿಯಾಗಿರುವ ಸಂಸ್ಥೆಗಳ ಸಂಖ್ಯೆ ಸುಮಾರು 361 ಆಗಿದ್ದು, ಈ ಸಂಸ್ಥೆಗಳಿಗೆ ವಾರ್ಷಿಕ ₹.12,000/– ಹೆಚ್ಚಿಸಿದಲ್ಲಿ ಅಗತ್ಯತೆ ಇರುವ ಮೊತ್ತ ಕ್ರಮವಾಗಿ ₹.33,60,00,000/–ಮತ್ತು ₹.31,00,000/–ಗಳಾಗುತ್ತದೆಯೆಂದು, ಆದುದರಿಂದ ₹.6,000/–ಕ್ಕಿಂತ ಹೆಚ್ಚು 12,000/–ಕ್ಕಿಂತ ಕಡಿಮೆ ತಸ್ತೀಕು ನಿಗದಿಯಾಗಿರುವ ಸಂಸ್ಥೆಗಳಿಗೆ ವಾರ್ಷಿಕವಾಗಿ ₹.12,000/–ಗಳಿಗೆ 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಣೆ ಮಾಡಿರುವಂತೆ ಸರ್ಕಾರವು ಧಾರ್ಮಿಕ ಸಂಸ್ಥೆಗಳಿಗೆ ತಸ್ತೀಕ್ ಮೊತ್ತವನ್ನು ಹೆಚ್ಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುತಬ 2010, ಬೆಂಗಳೂರು, ದಿನಾಂಕ: 14.9.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ವಾರ್ಷಿಕವಾಗಿ ₹.5,999/–ಕ್ಕಿಂತ ಕಡಿಮೆ ತಸ್ತೀಕ್ ಮೊತ್ತ ನಿಗದಿಪಡಿಸಿರುವ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ವಾರ್ಷಿಕವಾಗಿ ಕನಿಷ್ಠ ₹.6,000/–ಗಳ ತಸ್ತೀಕ್ ಮೊತ್ತವನ್ನು ನೀಡುತ್ತಿದ್ದು, ಈ ಮೊತ್ತವನ್ನು ವಾರ್ಷಿಕವಾಗಿ ₹.12,000/–(ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಹೆಚ್ಚಿಸಿ 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಧಾರ್ಮಿಕ ದತ್ತಿ ಆಯುಕ್ತರಿಗೆ ಅನುಮತಿ ನೀಡಿ ಆದೇಶಿಸಿದೆ.

ಸದರಿ ಮೊತ್ತವನ್ನು ತಸ್ತೀಕ್ ಲೆಕ್ಕಶೀರ್ಷಿಕೆ "2075–00–101–1–01–(100) ಯೋಜನೇತರ ಇನಾಂ ರದ್ದಿಯಾತಿ ಅಧಿನಿಯಮದ ಮೇರೆಗೆ ನೀಡುವ ಮೊಬಲಗು–ತಸ್ತೀಕ್ ಮೊತ್ತ" ರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ಪ್ರಭಾಕರ್**
ಸರ್ಕಾರದ ಕಾರ್ಯದರ್ಶಿ
ಕಂದಾಯ ಇಲಾಖೆ.

ಪಿ.ಆರ್. 2440

## ಕಂದಾಯ ಸಚಿವಾಲಯ

**ವಿಷಯ :** ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ತಹಶೀಲ್ದಾರ್ (ಗ್ರೇಡ್–2) ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ: ಕಂಇ 28 ಎಟಿಎಸ್ 93, ದಿನಾಂಕ: 05–07–1993

2) ಸರ್ಕಾರದ ಆದೇಶ ಸಂ: ಕಂಇ 18 ಎಎಸ್‌ಡಿ 2008, ದಿನಾಂಕ: 06–05–2008.

3) ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂ:ಸಿಬ್ಬಂದಿ (5): ಸಿಆರ್– 15/09–10, ದಿ: 15–07–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ಮೈಸೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ತಲಾ ಒಂದು ತಹಶೀಲ್ದಾರ್ ಗುಂಪು–ಬಿ ಹುದ್ದೆಯನ್ನು ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಯನ್ನು ಕಾಲಕಾಲಕ್ಕೆ ಅವಶ್ಯಕತೆಗನುಗುಣವಾಗಿ ಮುಂದುವರೆಸಲಾಗುತ್ತಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 04–07–2005 ರಿಂದ 03–07–2009 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು.

ಈ ಹುದ್ದೆಯನ್ನು ಪುನಃ ಮುಂದುವರೆಸುವಂತೆ ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 15–07–2009ರಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು, ಇವರು ಕೋರಿದ್ದು, ಸರ್ಕಾರವು ಈ ಅಂಶವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ : ಕಂಇ 591 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 08–09–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ತಹಶೀಲ್ದಾರ್ ಗ್ರೇಡ್–2 ಶಿಷ್ಟಾಚಾರ ಹುದ್ದೆಯನ್ನು ದಿನಾಂಕ: 04–07–2009 ರಿಂದ 03–07–2010 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ಸರ್ಕಾರ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ: 10–07–1996 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ.ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2441

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಹೆಚ್.ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಪ್ರಸ್ತುತ ವಿಶೇಷ ತಹಶೀಲ್ದಾರ್, ಪೂರ್ವ ತಾಲ್ಲೂಕು, ಕೃಷ್ಣರಾಜಪುರ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮಂಡನಾಧಿಕಾರಿಗಳನ್ನು ಬದಲಾಯಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಡಿಇ 2009 ದಿನಾಂಕ: 26–5–2010.

(2) ಶ್ರೀ ಹೆಚ್.ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಪ್ರಸ್ತುತ ವಿಶೇಷ ತಹಶೀಲ್ದಾರ್, ಪೂರ್ವ ತಾಲ್ಲೂಕು, ಕೃಷ್ಣರಾಜಪುರ, ಬೆಂಗಳೂರು ನಗರ ಜಿಲ್ಲೆ ಇವರ ಮನವಿ ದಿನಾಂಕ: 2–6–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 26–5–2010ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಇವರ ವಿರುದ್ಧ ಬೆಂಗಳೂರಿನಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ರುಕ್ಕಾಜಿ ರಾಮಕೃಷ್ಣಭಟ್, ನಿವೃತ್ತ ನ್ಯಾಯಾಧೀಶರು, ನಂ. 2, 1ನೇ ಕ್ರಾಸ್, ಜುಡಿಷಿಯಲ್ ಲೇಔಟ್, ಸಂಜಯನಗರ, ಬೆಂಗಳೂರು–560 094 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 (5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ಹೊಸಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಶ್ರೀ ಹೆಚ್.ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಪ್ರಸ್ತುತ ವಿಶೇಷ ತಹಶೀಲ್ದಾರ್, ಪೂರ್ವ ತಾಲ್ಲೂಕು, ಕೃಷ್ಣರಾಜಪುರ, ಬೆಂಗಳೂರು ನಗರ ಜಿಲ್ಲೆ ಇವರ ದಿನಾಂಕ: 2–6–2010ರ ಮನವಿಯಲ್ಲಿ, ಸರ್ಕಾರದ ಕಾರಣ ಕೇಳುವ ನೋಟಿಸಿನೊಂದಿಗೆ ಜಾರಿ ಆಗಿರುವ ಆರೋಪ ಪಟ್ಟಿಯ ಅನುಬಂಧ 4 ರ 2ನೇ ಕ್ರಮ ಸಂಖ್ಯೆಯಲ್ಲಿ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಹೊಸಕೋಟೆ ಇವರನ್ನು ಅಂದರೆ, ಶ್ರೀ ದಯಾನಂದ ಭಂಡಾರಿ ಇವರನ್ನು 2ನೇ ಸಾಕ್ಷಿದಾರರನ್ನಾಗಿ ನಮೂದಿಸಲಾಗಿದೆ. ಸಾಕ್ಷಿ ಪಟ್ಟಿಯಲ್ಲಿರುವ ಸಾಕ್ಷಿದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಅವಕಾಶವಿಲ್ಲವೆಂದು ತಿಳಿಸುತ್ತಾ, ಇದರಲ್ಲಿ ಮಂಡನಾಧಿಕಾರಿಯನ್ನು ಸಾಕ್ಷಿದಾರರನ್ನಾಗಿ ಮಾಡಿದಲ್ಲಿ ಅವರನ್ನು ಆಪಾದಿತರು ಪಾಟೀ ಸವಾಲು ಮಾಡಬೇಕಾಗುವುದು, ಮಂಡನಾಧಿಕಾರಿಯವರನ್ನು ಪಾಟೀ ಸವಾಲು ಮಾಡುವಂತಿಲ್ಲವೆಂದು, ಈ ರೀತಿಯ ವಿಚಾರಣೆಯು ಅನೂರ್ಜಿತವಾಗುವುದು ಎಂದು ತಿಳಿಸುತ್ತಾ, ಅವರ ವಿರುದ್ಧ ಮಾಡಿರುವ ಆರೋಪಗಳನ್ನು ಅಲ್ಲಗಳೆಯುತ್ತಾ, ಸದರಿ ಮಾಹಿತಿಗಳನ್ನು ಪರಿಗಣಿಸಿ ಆರೋಪಗಳಿಂದ ತಮ್ಮನ್ನು ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸರ್ಕಾರದ ದಿನಾಂಕ: 26–5–2010ರ ಆದೇಶದಲ್ಲಿ, ಮಂಡನಾಧಿಕಾರಿಯಾಗಿ ನೇಮಿಸಲಾಗಿರುವ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಹೊಸಕೋಟೆ ಇವರು ಪ್ರಸ್ತುತ ಇಲಾಖಾ ವಿಚಾರಣೆಯ 2ನೇ ಸಾಕ್ಷಿದಾರರನ್ನಾಗಿ ನಮೂದಿಸಲಾಗಿರುವುದರಿಂದ, ಇದನ್ನು ಸರ್ಕಾರವು ಪರಿಶೀಲಿಸಿ, ಮಂಡನಾಧಿಕಾರಿಯಾಗಿ ನೇಮಿಸಿರುವ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಹೊಸಕೋಟೆ ಇವರ ಬದಲಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿ ಸಹಾಯಕ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ತೀರ್ಮಾನಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಡಿಇ 2009, ಬೆಂಗಳೂರು, ದಿನಾಂಕ: 8–9–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್.ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಇವರ ವಿರುದ್ಧ ಬೆಂಗಳೂರಿನಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ರುಕ್ಕಾಜಿ ರಾಮಕೃಷ್ಣಭಟ್, ನಿವೃತ್ತ ನ್ಯಾಯಾಧೀಶರು, ನಂ.2, 1ನೇ ಕ್ರಾಸ್, ಜುಡಿಷಿಯಲ್ ಲೇಔಟ್, ಸಂಜಯ ನಗರ, ಬೆಂಗಳೂರು–560094 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 (5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು, ಹೊಸಕೋಟೆ ಇವರ ಬದಲಾಗಿ ಕಛೇರಿ ಸಹಾಯಕರು, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ. ಇನ್ನುಳಿದಂತೆ ದಿನಾಂಕ: 26–5–2010ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ.ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2442

## ಕಂದಾಯ ಸಚಿವಾಲಯ

**ವಿಷಯ :** ರಾಜ್ಯದ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯ ನಿರ್ವಹಿಸಲು ಮಂಜೂರಾಗಿದ್ದ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ದಿನಾಂಕ: 01–04–2010 ರಿಂದ 31–03–2011ರ ವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಕಂಇ 17 ಎಲ್ಆರ್ಇ 88 (ಭಾಗ–2), ದಿ:14–05–93.

2) ಸರ್ಕಾರದ ಆದೇಶ ಸಂಖ್ಯೆ:ಕಂಇ 68 ಎಲ್ಆರ್ಎ 2001, ದಿನಾಂಕ:22–10–01.

3) ಸರ್ಕಾರದ ಆದೇಶ ಸಂಖ್ಯೆ:ಕಂಇ 85 ಎಲ್ಆರ್ಎ 2002, ದಿನಾಂಕ:07–09–2002.

4) ಸರ್ಕಾರದ ಆದೇಶ ಸಂಖ್ಯೆ:ಕಂಇ 50 ಎಲ್ಆರ್ಎ 2003, ದಿನಾಂಕ:16–12–03.

5) ಸರ್ಕಾರದ ಆದೇಶ ಸಂಖ್ಯೆ:ಕಂಇ 131 ಎಲ್ಆರ್ಎ 2004, ದಿನಾಂಕ:15–01–2005.

6) ಸರ್ಕಾರದ ಆದೇಶ ಸಂಖ್ಯೆ:ಕಂಇ 79 ಎಲ್ಆರ್ಎ 2005, ದಿನಾಂಕ:01–07–2005.

7) ಸರ್ಕಾರದ ಆದೇಶ ಸಂಖ್ಯೆ:ಕಂಇ 15 ಎಲ್ಆರ್ಎ 2006, ದಿನಾಂಕ:19–10–2006.

8) ಸರ್ಕಾರದ ಆದೇಶ ಸಂಖ್ಯೆ:ಕಂಇ 13 ಎಲ್ಆರ್ಎಂ 2007, ದಿನಾಂಕ:24–11–2007.

9) ಸರ್ಕಾರದ ಆದೇಶ ಸಂಖ್ಯೆ:ಕಂಇ 36 ಎಲ್ಆರ್ಎಂ 2008, ದಿನಾಂಕ:05.08.2008.

10) ಸರ್ಕಾರದ ಆದೇಶ ಸಂಖ್ಯೆ:ಕಂಇ 08 ಎಲ್ಆರ್ಎಸ್ 2009, ದಿನಾಂಕ:18–07–2009.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯ ನಿರ್ವಹಿಸಲು ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲಾಗಿದ್ದು ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗುತ್ತಿದೆ. ಅಂತಿಮವಾಗಿ ಕಳೆದ ಸಾಲಿನಲ್ಲಿ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು (142 ಹುದ್ದೆಗಳು) ದಿನಾಂಕ:01–04–2009 ರಿಂದ 31–03–2010ರ ವರೆಗೆ ಒಂದು ವರ್ಷದ ಕಾಲಾವಧಿಗೆ ಮುಂದುವರೆಸಲಾಗಿದೆ.

ಪ್ರಸ್ತುತ 2010–11ನೇ ಸಾಲಿನಲ್ಲಿ ಭೂ ಸುಧಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ 144 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಮುಂದುವರೆಸಲು ಆಯವ್ಯಯದ ಅಪೆಂಡಿಕ್ಸ್ "ಬಿ" ನಲ್ಲಿ ಅವಕಾಶ ಕಲ್ಪಿಸಲಾಗಿದೆ. ರಾಜ್ಯದ ಕೆಲವು ಜಿಲ್ಲಾಧಿಕಾರಿಗಳು ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯ ನಿರ್ವಹಿಸುತ್ತಿರುವ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಅಗತ್ಯವಾಗಿರುವುದರಿಂದ ಮತ್ತೊಂದು ವರ್ಷ ಮುಂದುವರೆಸುವಂತೆ ಕೋರಿದ್ದು, ಪ್ರಾದೇಶಿಕ ಆಯುಕ್ತರ/ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಹಾಗೂ ರೆವಿನ್ಯೂ ಆಡಿಟರ್ಸ್ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರೆಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಎಲ್ಆರ್ಎಸ್ 2010 ಬೆಂಗಳೂರು, ದಿನಾಂಕ : –08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯ ನಿರ್ವಹಿಸಲು ಸೃಜಿಸಲಾಗಿದ್ದ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 144 ಹುದ್ದೆಗಳನ್ನು (2010–11ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್ "ಬಿ" ನಲ್ಲಿ ವಿವರಿಸಿರುವಂತೆ ಬೆಂಗಳೂರು ವಿಭಾಗದ ಜಿಲ್ಲೆಗಳಿಗೆ 51 ಹುದ್ದೆಗಳು ಮೈಸೂರು ವಿಭಾಗದ ಜಿಲ್ಲೆಗಳಿಗೆ 44 ಹುದ್ದೆಗಳು ಹಾಗೂ ಬೆಳಗಾವಿ ವಿಭಾಗದ ಜಿಲ್ಲೆಗಳಿಗೆ 49 ಹುದ್ದೆಗಳು ಹೀಗೆ ಒಟ್ಟು 144 ಹುದ್ದೆಗಳು) ಒಂದು ವರ್ಷದ ಅವಧಿಗೆ ಅಂದರೆ, ದಿನಾಂಕ: 01–04–2010 ರಿಂದ 31–03–2011 ರ ವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

ಸದರಿ ಬಾಬ್ತಿಗೆ ತಗಲುವ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ "2506–ಲ್ಯಾಂಡ್ ರಿಫಾರ್ಮ್ಸ್–ರೆಗ್ಯುಲೇಷನ್ ಆಫ್ ಲ್ಯಾಂಡ್ ಹೋಲ್ಡಿಂಗ್ ಅಂಡ್ ಟೆನನ್ಸಿ" (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಹುದ್ದೆಗಳ ಮುಂದುವರಿಕೆಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ:ಕಂಇ 17 ಎಲ್ಆರ್ಇ 88(ಭಾಗ–2), ದಿನಾಂಕ: 14–05–93 ರಲ್ಲಿ ವಿಧಿಸಿರುವ ಷರತ್ತುಗಳು ಅನ್ವಯವಾಗುತ್ತವೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 96 ದಿನಾಂಕ: 10.07.1996 ಹಾಗೂ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2003 ದಿನಾಂಕ: 12.06.2003 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 2443

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎನ್.ಬಿ. ಅಲಮೇಲು, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮದ್ದೂರು ಇವರನ್ನು ಸರ್ಕಾರಿ ಸೇವೆಯಲ್ಲಿ ಪುನರ್ ನಿಯುಕ್ತಿಗೊಳಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 56 ಪಿಪಿಇ 99, ದಿನಾಂಕ: 12.01.2000.

2) ಸರ್ಕಾರದ ಆದೇಶ ಸಂಖ್ಯೆ: ಒಇ 12 ಪಿಪಿಇ 2007, ದಿನಾಂಕ: 17.06.2010.

3) ಸರ್ಕಾರದ ಆದೇಶ ಸಂಖ್ಯೆ: ಒಇ 367 ಪಿಪಿಇ 2008, ದಿನಾಂಕ: 16.10.2008.

**ಪ್ರಸ್ತಾವನೆ:**

ಶ್ರೀಮತಿ ಎನ್.ಬಿ.ಅಲಮೇಲು, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮದ್ದೂರು ಇವರು ಮೇಲೆ ಓದಲಾದ ದಿನಾಂಕ 12.01.2000ರ (ಕ್ರ.ಸಂ.61) ಅಧಿಸೂಚನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ

ಇಲಾಖೆಯಲ್ಲಿ ನೇರ ನೇಮಕಾತಿ ಮೂಲಕ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ: 19.01.2000ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದರು.

ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿತ್ತು:

(1) ಸದರಿಯವರು ಕರ್ತವ್ಯಕ್ಕೆ ಹಾಜರಾಗುವ ದಿನಾಂಕದಿಂದ ಎರಡು ವರ್ಷಗಳ ಅವಧಿಯವರೆಗೆ ಪರಿವೀಕ್ಷಣಾ ಅವಧಿಯಲ್ಲಿರತಕ್ಕದ್ದು. ಪರಿವೀಕ್ಷಣಾ ಅವಧಿಯಲ್ಲಿ ಅವರು 1974ರ ಕರ್ನಾಟಕ ಸಿವಿಲ್ ಸೇವೆಗಳ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳಲ್ಲಿ ಗೊತ್ತು ಪಡಿಸಿರುವಂತೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಈ ಮುಂದಿನ ಸೇವಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು.

(ಅ) ಅಕೌಂಟ್ಸ್ ಹೈಯರ್

(ಆ) ಜನರಲ್ ಲಾ–ಭಾಗ 1 ಪ್ರಶ್ನೆ ಪತ್ರಿಕೆ 2 ಮತ್ತು ಗೊತ್ತುಪಡಿಸಬಹುದಾದ ಇತರೆ ಯಾವುದೇ ಸಿವಿಲ್ ಸೇವಾ ಪರೀಕ್ಷೆಗಳು.

ಆದರೆ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗದೆ ಇದ್ದುದರಿಂದ, ಇವರ ಪರಿವೀಕ್ಷಣಾ ಅವಧಿಯನ್ನು ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ 18.01.2002 ರಿಂದ ದಿನಾಂಕ 31.05.2008ರವರೆಗೆ ವಿಸ್ತರಿಸಲಾಗಿತ್ತು.

ಸದರಿಯವರಿಗೆ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಸಾಕಷ್ಟು ಸಮಯಾವಕಾಶ ನೀಡಿದ್ದರೂ, ವಿಸ್ತರಿಸಿದ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗದೇ ಇದ್ದುದರಿಂದ, ಅವರು ಸರ್ಕಾರದ ಸೇವೆಯಲ್ಲಿ ಮುಂದುವರೆಯಲು ಅಸಮರ್ಥರು ಎಂದು ಪರಿಗಣಿಸಿ, ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀಮತಿ ಎನ್.ಬಿ. ಅಲಮೇಲು ಇವರನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳ 1977 ರ 5(1.)(ಬಿ)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮುಕ್ತಿ (Discharge) ಗೊಳಿಸಲಾಗಿತ್ತು.

ಸದರಿ ಆದೇಶದ ವಿರುದ್ಧ ಶ್ರೀಮತಿ ಎನ್.ಬಿ. ಅಲಮೇಲು ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 5356/2008ನ್ನು ಸಲ್ಲಿಸಿದ್ದು, ಮಾನ್ಯ ಆಡಳಿತ ನ್ಯಾಯಮಂಡಳಿಯು ಅವರ ಅರ್ಜಿಯನ್ನು ದಿನಾಂಕ 19.04.2010ರಂದು ವಜಾಗೊಳಿಸಿರುತ್ತದೆ.

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 5356/2008ರಲ್ಲಿ ಮಾನ್ಯ ನ್ಯಾಯಮಂಡಳಿಯ ಆದೇಶದ ವಿರುದ್ಧ ಶ್ರೀಮತಿ ಎನ್.ಬಿ. ಅಲಮೇಲು ಇವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ: 14531/2010 (ಎಸ್‌ಕೆಎಟಿ) ಅನ್ನು ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 19.07.2010ರಂದು ಈ ಕೆಳಕಂಡಂತೆ ಆದೇಶ ಮಾಡಿದ್ದು, ಸದರಿ ಆದೇಶದ ಉದ್ಧೃತ ಭಾಗವು ಈ ಕೆಳಕಂಡಂತಿರುತ್ತದೆ.

> "9. In the result, the writ petition is allowed. The order dated 16.10.2008 passed by the 1st respondent is hereby quashed by reversing the order dated 19.04.2010 passed by the Karnataka Administrative Tribunal in Application No. 5356/2008. The petitioner shall be reinstated forthwith. The 1st respondent is directed to extend her probationary period by granting some reasonable time for the petitioner to appear for the accounts higher examination. It is also made clear that the petitioner is not entitle for any monetary benefit. However, if she passes the accounts higher examination and her probationary period is confirmed, she is entitled for continuity of service."

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 140 ಪಿಪಿಇ 2010, ಬೆಂಗಳೂರು, ದಿನಾಂಕ : 21ನೇ ಸೆಪ್ಟೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀಮತಿ ಎನ್.ಬಿ. ಅಲಮೇಲು ಇವರನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯಲ್ಲಿ ಪುನರ್‌ನಿಯುಕ್ತಿಗೊಳಿಸಲಾಗಿದೆ.

(1) ಸದರಿಯವರು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಒಳಗಾಗಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು;

(2) ಹೀಗೆ ಕೊಟ್ಟಿರುವ ಒಂದು ವರ್ಷ ಸಮಯದಲ್ಲಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೇ ಇದ್ದಲ್ಲಿ ಅವರನ್ನು ಸೇವೆಯಿಂದ ವಜಾ ಮಾಡಲಾಗುವುದು;

(3) ಸದರಿಯವರು ವಜಾಗೊಂಡ ದಿನಾಂಕದಿಂದ ಪುನರ್‌ನಿಯುಕ್ತಿಗೊಳಿಸಿದ ದಿನಾಂಕದವರೆಗಿನ ಅವಧಿಯಲ್ಲಿ ಯಾವುದೇ ರೀತಿಯ ಆರ್ಥಿಕ ಸೌಲಭ್ಯಗಳಿಗೆ ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

ಪಿ.ಆರ್. 2444 (ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಟಿ.ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ದೇವರಾಜ್, ಶಾಖಾಧಿಕಾರಿ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೇಇವಿ 2008, ದಿನಾಂಕ: 29-04-2008.
2) ನೋಟೀಸ್ ಸಂಖ್ಯೆ: ಸಿಆಸುಇ 6 ಸೇಇವಿ 2008, ದಿನಾಂಕ: 06-11-2008.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೇಇವಿ 2008, ದಿನಾಂಕ: 17-03-2009 ಮತ್ತು ದಿನಾಂಕ: 01-12-2009.
4) ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಮನವಿ ದಿನಾಂಕ: 12-11-2008 ಮತ್ತು 13-01-2009 ಹಾಗೂ ಶ್ರೀ ದೇವರಾಜ್, ಶಾಖಾಧಿಕಾರಿ ಇವರ ಮನವಿ ದಿನಾಂಕ: 02-12-2008.
5) ಶ್ರೀ ದೇವರಾಜ್, ಇವರ ಲಿಖಿತ ಹೇಳಿಕೆ ದಿನಾಂಕ: 13-01-2009.

**ಪ್ರಸ್ತಾವನೆ:**

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ದೇವರಾಜ್, ಶಾಖಾಧಿಕಾರಿ ಇವರುಗಳು ಈ ಹಿಂದೆ ಆರ್ಥಿಕ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟ ಪ್ರಕರಣದಲ್ಲಿ ಆರ್ಥಿಕ ಇಲಾಖೆಯಲ್ಲಿ ತಮ್ಮ ಮೇಲಾಧಿಕಾರಿಗಳು ತೆಗೆದುಕೊಂಡ ತೀರ್ಮಾನಕ್ಕೆ ವ್ಯತಿರಿಕ್ತವಾಗಿ ಹಾಗೂ ಆಡಳಿತ ಇಲಾಖೆಯ ಪ್ರಸ್ತಾವನೆಗೆ ಅನುಕೂಲಕರವಾಗುವ ರೀತಿಯಲ್ಲಿ ಸರ್ಕಾರಿ ವೈಮಾನಿಕ ತರಬೇತಿ ಸಂಸ್ಥೆಯ ನಿರ್ವಹಣೆಯನ್ನು ಸಹಗುತ್ತಿಗೆಗೆ ನೀಡುವ ವಿಚಾರದಲ್ಲಿ ಅಭಿಪ್ರಾಯ ನೀಡಿದ್ದು, ಆ ಮೂಲಕ ತೀವ್ರವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 29-04-2008 ರಲ್ಲಿ ಸದರಿ ಅಧಿಕಾರಿಗಳನ್ನು ಶಿಸ್ತು ಕ್ರಮ ಬಾಕಿ ಇರಿಸಿ ಅಮಾನತ್ತುಗೊಳಿಸಲಾಗಿತ್ತು.

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ದೇವರಾಜ್, ಶಾಖಾಧಿಕಾರಿ ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ನೋಟೀಸ್‌ನೊಂದಿಗೆ ಅನುಬಂಧ-1 ರಿಂದ 4 ರಲ್ಲಿ ದೋಷಾರೋಪಣಾ ಪಟ್ಟಿಯಲ್ಲಿ ಜಾರಿ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3) ಮತ್ತು (4) ಆದೇಶಗಳಲ್ಲಿ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ದೇವರಾಜ್, ಶಾಖಾಧಿಕಾರಿ ಇವರುಗಳ ವಿರುದ್ಧ ಶಿಸ್ತು ಕ್ರಮ ಬಾಕಿ ಇಟ್ಟು ಅವರ ಅಮಾನತ್ತನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರಗಳಲ್ಲಿ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ದೇವರಾಜ್, ಶಾಖಾಧಿಕಾರಿ ಇವರುಗಳು ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸುವ ಸಲುವಾಗಿ ಕೆಲವಾರು ದಾಖಲೆಗಳ ಪ್ರತಿ ಒದಗಿಸುವಂತೆ ಕೋರಿದ್ದು, ಅದರಂತೆ ಸದರಿ ಪ್ರತಿಗಳನ್ನು ಒದಗಿಸಲಾಗಿದೆ. ಆದಾಗ್ಯೂ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ತಮ್ಮ ವಿರುದ್ಧ ಹೊರಿಸಲಾದ ಆರೋಪಗಳಿಗೆ ನಿಗದಿತ ಸಮಯದಲ್ಲಿ ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (5)ರ ಪತ್ರದಲ್ಲಿ ಶ್ರೀ ದೇವರಾಜ್, ಶಾಖಾಧಿಕಾರಿ ಇವರು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಸದರಿಯವರ ಪ್ರತಿರಕ್ಷಣಾ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡುಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿವರವಾದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ಬೆಂಗಳೂರು ದಿನಾಂಕ : 16ನೇ ಸೆಪ್ಟೆಂಬರ್ 2010.**

ಶ್ರೀ ಟಿ. ಅಶೋಕ್, ಹಿಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಪ್ರಸ್ತುತ ಅಧೀನ ಕಾರ್ಯದರ್ಶಿ, ಕರ್ನಾಟಕ ಮಾಹಿತಿ ಆಯೋಗ) ಮತ್ತು ಶ್ರೀ ದೇವರಾಜ್, ಹಿಂದಿನ ಶಾಖಾಧಿಕಾರಿ, ಆರ್ಥಿಕ ಇಲಾಖೆ (ಪ್ರಸ್ತುತ ಶಾಖಾಧಿಕಾರಿ, ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ) ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎನ್.ಸುಬ್ಬಾರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಅದೇ ನಿಯಮಾವಳಿಗಳ ನಿಯಮ 11(5) (ಸಿ)ರ ಅನ್ವಯ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-5) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ನಿಯಮಾನುಸಾರ ಗೌರವಧನ ಹಾಗೂ ವಾಹನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಅಧೀನ ಕಾರ್ಯದರ್ಶಿ ಆರ್ಥಿಕ ಇಲಾಖೆ (ವೆಚ್ಚ-5) ಇವರು ಕ್ರಮ ವಹಿಸತಕ್ಕದ್ದು.

ವಿಚಾರಣಾಧಿಕಾರಿಗಳು, ಆರೋಪಿತರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಬಗ್ಗೆ ಸ್ಪಷ್ಟ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 2445

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಫಸಿಯುದ್ದೀನ್, ಪ್ರೊ.ಪಿ.ಎಸ್.ಐ. ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 31/ಸಿಬ್ಬಂದಿ–1/2010–11 ದಿನಾಂಕ: 30–07–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ಎಂ.ಫಸಿಯುದ್ದೀನ್, ಪ್ರೊ.ಪಿ.ಎಸ್.ಐ, ವಿದ್ಯಾನಗರ ಪೊ.ಠಾಣೆ, ದಾವಣಗೆರೆ ಜಿಲ್ಲೆ ರವರು ಪಿ.ಎಸ್.ಐ. ಆಗಿ ದಿನಾಂಕ: 07–06–2006 ರಂದು ನೇಮಕಗೊಂಡಿರುತ್ತಾರೆ. ಇವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯ ತರಬೇತಿಯಲ್ಲಿ ನಿಗಧಿಪಡಿಸಿದ ಸಿ.ಆರ್.ಪಿ.ಸಿ. ಮತ್ತು ಎಂ.ಓ. ವಿಷಯಗಳಲ್ಲಿ ಅನುತ್ತೀರ್ಣರಾಗಿದ್ದರಿಂದ ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಐಜಿಪಿ, ಪೂರ್ವ ವಲಯ, ದಾವಣಗೆರೆ ರವರು ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ 1 ವರ್ಷ 3 ತಿಂಗಳು ಅಂದರೆ ದಿನಾಂಕ 07–12–2008 ರಿಂದ 07–03–2010 ರವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಲಾಗಿರುತ್ತದೆ. ಸದರಿ ಪಿ.ಎಸ್.ಐ. ರವರು ದಿನಾಂಕ: 24–05–2010 ರಂದು ಸಿ.ಆರ್.ಪಿ.ಸಿ. ಮತ್ತು ಎಂ.ಓ. ವಿಷಯಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಆದ್ದರಿಂದ, ಇವರ ಖಾಯಂಪೂರ್ವ ಅವಧಿ ದಿನಾಂಕ: 08–03–2010 ರಿಂದ 23–05–2010 ರವರೆಗೆ ಕೆ.ಸಿ.ಎಸ್.(ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 298 ಪೊಸಇ 2010, ಬೆಂಗಳೂರು, ದಿನಾಂಕ : 15–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ಎಂ.ಫಸಿಯುದ್ದೀನ್, ಪ್ರೊ.ಪಿ.ಎಸ್.ಐ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 08–03–2010 ರಿಂದ 23–05–2010 ರವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಾಕಿಯನ್ನು ನೀಡಲು ಪರಿಗಣಿಸಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2446 ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## COMMERCE & INDUSTRIES SECRETARIAT

**Sub :** Reimbursement of Central Sales Tax paid from March 2009 to June 2010 on inter-state sale of metro coaches by M/s BEML Ltd. to Delhi Metro Rail Corporation-Reg.

**Read :**
1. G. O. No. FD 283 CSL 2009 dated 8.12.2009.
2. Letter No. ಕೈಅ/ಇ3/ಬಿಇಎಂಎಲ್/ವ್ಯಾಟ್/2010–11 Bangalore dated 11.05.2010.
3. Letter Nos. AR-1/Metro/CST/09 dt: 21.1.2010, 15.3.2010, 21.4.2010, 4.6.2010, 23.7.2010 & 4.8.2010 from Deputy General Manager (Finance and Accounts) BEML. Bangalore.
4. Tax Paid Certificate No: LVO-110/T. 09-10, dated: 16.01.2010, No: LVO-110/T.41/09-10, dated: 11.03.2010, No: LVO-110/T./10-11, dated: 03.04.2010, No. LVO-110/T./ 10-11, dated: 28-05-2010, No. LVO-110/T/10-11, dated 15-07-2010, No LVO-110/T./10-11, dated: 03.08.2010,

In the Govt. Order read at (1) above, sanction was accorded for reimbursement of tax paid under the Central Sales Tax Act, 1956 by BEML, on its inter-State sale of metro coaches to Delhi Metro Rail Corporation.

In the letters read at (2) above, the Commissioner for Industrial Development and Director of Industries & Commerce, has requested to make a budget provision of ₹ .60 crores under the Head of Account of reimbursement of sales tax.

In the letters read at (3) above, the Deputy General Manager (Finance and Accounts.) BEML Ltd., Bangalore has sought reimbursement of ₹ .46,88,58,142/-to M/s BEML Ltd., Bangalore, towards the CST paid on inter-state sales made to Delhi Metro Rail Corporation from March 2009 to June 2010, duly attaching the copies of the sales tax paid certificates issued by the Commercial Taxes Dept. (reference-4).

The proposal has been examined in detail and hence the following order.

**GOVT. ORDER NO. CI 430 SPI 2010 BANGALORE, DATED : 20.09.2010**

For the reasons explained above, sanction is hereby accorded for the release of Rs. 46.88 crores (Rs forty six crores and eighty lakhs only) under the Head of A/c "6852-02-800-0-02" (plan) towards reimbursement of Central Sales Tax to BEML as interest free loan to be converted into grant subsequently.

DGM (Finance and Accounts) Bangalore complex. BEML Ltd., is authorized to draw the amount on payee's receipt duly countersigned by Commissioner for Industrial Development and Director of Industries and Commerce.

This order is issued with the concurrence of Finance Dept. vide its Note No. FD 1444 Exp-1/10 dated 8.09.2010.

By order and in the name of the Governor of Karnataka,
**K.R.Chandramma**
Desk Officer (Technical Cell) [I/c]
Commerce & Industries Dept.

P.R. 2447

## COMMERCE AND INDUSTRIES SECRETARIAT

**Sub :** Repayment of loan advanced by NCDC for various schemes of co-operative development in Karnataka for the year 2009-10.

**Read :** 1) Letter No.NCDC/A&C/X(1) Rep/2001-02/332(IV) dated: 19-08-2010 from Assistant Director (Loan) NCDC (Finance Division) New Delhi.
2) Letter No.DHT/JRCS/JT/Co-Textiles/NCDC/Repayment/2010-11, dated 31-08-2010 from the Commissioner for Textiles & Development & Director of Handlooms & Textiles, Bangalore.

**PREAMBLE:**

The Assistant Director (Loan), National Cooperative Development Corporation, New Delhi, in his letter dated 19-08-2010, read at (1) above, has intimated that a sum of ₹.1,24,91,039-00 towards regular installment of loan with normal rate of interest after allowing rebate for timely payment is due for payment to the NCDC on or before 5-10-2010, against the loan advanced under various schemes to cooperative textiles (spinning mills) in Karnataka for the year 2009-10. It is also mentioned that rebate will be admissible for timely repayment of loan installment, i.e. before 5-10-2010 and the State Govt will have to pay interest at penal rate for the period of delay.

The Commissioner for Textiles & Director of Handlooms & Textiles, Bangalore, in his letter dated 31-08-2010, read at (2) above, has reported that the above amount is due to be paid to NCDC New Delhi, before 5-10-2010 for the year 2009-10.

The proposal has been examined and the following orders are issued.

**GOVERNMENT ORDER NO. CI 16 CIM 2010, BANGALORE, DATED : 20-09-2010**

In the circumstances explained above, Government is pleased to accord sanction for the release of ₹.1,24,91,039-00 (Rupees one crore, twenty four lakhs, ninty one thousand thirty nine only) (principal of ₹.84,43,100-00 and interest of ₹.40,47,939-00) to be payable to the NCDC, New Delhi, in respect of various loans to cooperative textiles (spinning mills) for the year 2009-10.

The above expenditure shall be debitable to the Head of Account "6003-00-108-0-01" (NP) towards the principal amount of ₹.84,43,100-00 and "2049-01-200-2-03" towards interest of ₹.40,47,939-00.

"The Account Officer, office of the Commissioner for Textiles & Director of Handlooms & Textiles, Bangalore, is authorized to draw the said amount on payee's receipt duly countersigned by the Commissioner for Textiles & Director of Handlooms & Textiles and remit the same to the National Co-operative Development Corporation, New Delhi, before 5-10-2010."

The State Huzur Treasury, Bangalore and the District Treasury, Bangalore (Urban) shall honour the bills immediately.

This order issues with the concurrence of Finance Department vide U.O. Note No. FD 36 BGL 10(p) Dated 15.09.2010.

By Order and in the name of the Governor of Karanataka,
**C.SREENIVAS**
Under Secretary to Government
Commerce and Industries Department
(Co-operative Sugar)

P.R. 2448

## COMMERCE AND INDUSTRIES SECRETARIAT

**Sub :** Repayment of loan advanced by NCDC for various schemes of co-operative development in Karnataka for the year 2009-10.

**Read :** 1) Letter No.NCDC/A&C/X(1) Rep/2001-02/222(IV) dated: 16-07-2010 from Assistant Director (Loan) NCDC (Finance Division) New Delhi.
2) Letter No.DSK/FIN/33/2010-11 DATED 03-09-2010 from the Commissioner for Cane Development & Director of Sugar, Bangalore.

**PREAMBLE:**

The Assistant Director (Loan), National Co-operative Development Corporation, New Delhi, in his letter dated 16-07-2010, read at (1) above, has intimated that a sum of ₹.14,23,56,304-00 towards regular installment of loan with normal rate of interest,

after allowing rebate for timely payment is due for payment to the NCDC on or before 5-10-2010, against the loans advanced under various schemes under Central Sector/ corporation sponsored schemes up to 2009-10. It is also mentioned that rebate will be admissible for timely repayment of loan installment, i.e. before 5-10-2010 and the State Government will have to pay interest at penal rate for the period of delay.

The Commissioner for Cane Development and Director of Sugar, Bangalore, vide his letter dated 03-09-2010, read at (2) above, has reported that the above amount is due to be paid to NCDC, New Delhi, before 5-10-2010 for the year 2009-10.

The proposal has been examined and the following orders are issued.

**GOVERNMENT ORDER NO. CI 88 COM 2010, BANGALORE, DATED : 20-09-2010**

In the circumstances explained above, Government is pleased to accord sanction for the release of ₹.14,23,56,304-00 (Rupees fourteen crores, twenty three lakhs, fifty six thousand, three hundred four only) (₹.12,15,44,200-00 principal and ₹.2,08,12,104-00 interest) to be payable to the NCDC, New Delhi, in respect of various loans to cooperative sugar factories for the year 2009-10.

The above expenditure shall be debitable to the Head of Account "6003-00-108-0-01" (NP) towards the principal amount of ₹.12,15,44,200-00 and "2049-01-200-2-03" towards interest of ₹.2,08,12,104-00.

The Assistant Director of Co-operative Audit in the office of the Commissioner for Cane Development and Director of Sugar, Bangalore, is authorized to draw the said amount on payee's receipt duly countersigned by the Commissioner for Cane Development and Director of Sugar, Bangalore and remit the same to the National Co-operative Development Corporation, New Delhi, before 5.10.2010.

The State Huzur Treasury, Bangalore and the District Treasury, Bangalore (Urban) shall honour the bills immediately.

This orders issued with the concurrence of Finance Department vide U.O. Note No. FD 36 BGL 2010(P) Dated 15.09.2010.

By Order and in the name of the Governor of Karnataka,

**C.SREENIVAS**

Under Secretary to Government

Commerce and Industries Department

(Co-operative Sugar)

P.R. 2449

## WATER RESOURCES SECRETARIAT

**Subject :** According Administrative Approval to the Minor Irrigation Projects under Accelerated Irrigation Benefit Programme-Regarding.

**Read :** Letter No. CEMI (S)/ TA-2/ AE-2/Mysore/ AIBP/ 2010-11/2559/ Hassan/ Mysore / A.I.B.P./ 2010/ 2559, dt. 23.08.2010, from the Chief Engineer, Minor Irrigation South Zone, Bangalore.

**PREAMBLE:**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category states. 81 taluks in the state are approved under Drought prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of Central Grant that will be 90% of the project cost. The balance cost of the project will have to be borne by the State as state's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

**Head of Account: 4702-00-101-1-10-139 AIBP Major Works**

Amount ₹ .in lakhs.

| Sl. No. | Name of The Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Construction of checkdam across Gange halla near Lakya village. | Chicka magalur | Chicka magalur | 84.00 | 60.00 | 1.40 |
| 2 | Construction of checkdam across Kabbinahallihalla near Kabbinahalli village in Nagaralu grama panchayath. | Chicka magalur | Kadur | 87.00 | 80.00 | 1.09 |
| 3 | Construction of checkdam across Tenginamaradahalla near Chatnapalya village. | Chicka magalur | Kadur | 60.00 | 75.00 | 0.80 |
| 4 | Construction of checkdam across Vedahalla near Banavara road. (Across Tandya) | Chicka magalur | Kadur | 85.00 | 82.00 | 1.04 |
| 5 | Construction of checkdam across Vedahalla near Gubbihalla. | Chicka magalur | Kadur | 83.00 | 50.00 | 1.66 |
| 6 | Construction of checkdam across Naganahaluhalla near Nagarahalu village. | Chicka magalur | Kadur | 88.00 | 87.00 | 1.01 |
| | **Total** | | | **487.00** | | |

**Government Order No. SANEEYEE 236 MASAVI 2009 (1), Bangalore, dated : 16.09.2010**

In view of the above, the Administrative approval is hereby accorded for taking up the above 4 works withan estimated cost totaling to ₹ .487.00 lakhs (Four hundred and eighty seven lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90: 10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial spercifications as per the approved DPRs
8. Water users association shall be formed for post construction maintenance and the scheme shall be handed over to the same after its construction for the O&M..

This order is issued with the concurrence of Finance Department in their note No.PWD-890-FC-1/2009 dated 09.12.2009.

By Order and in the name of the Governor of Karnataka,
**RUDRAMURTHY**
Ex officio Under Secretary to Government
Water Resources Department (Minor Irrigation)

P.R. 2450

## WATER RESOURCES SECRETARIAT

**Subject :** According Administrative Approval to the Minor Irrigation Projects under Accelerated Irrigation Benefit Programme-Regarding.

**Read :** Letter No. CEMI (S)/ TA-2/ AE-2/Mysore/ AIBP/ 2010-11/2559/ Hassan/ Mysore / A.I.B.P./ 2010/2559, dt. 23.08.2010, from the Chief Engineer, Minor Irrigation South Zone, Bangalore.

**PREAMBLE:**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka state is classified as one of the non-special category states. 81 taluks in the state are approved under Drought prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit

Programme (AIBP). Central Assistance will be in the form of Central Grant that will be 90% of the project cost. The balance cost of the project will have to be borne by the State as state's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

**Head of Account: 4702-00-101-1-10-139 AIBP Major Works**

Amount ₹ .in lakhs.

| Sl. No. | Name of the Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Construction of checkdam across Kallaluholehalla near Kallahalli. | Chicka magalur | Kadur | 52.00 | 50.00 | 1.04 |
| 2 | Construction of checkdam across Vedahalla near Kabballi village. | Chicka magalur | Kadur | 99.00 | 90.00 | 1.05 |
| 3 | Construction of checkdam across halla near Kuppalu village. | Chicka magalur | Kadur | 100.00 | 98.00 | 1.02 |
| 4 | Construction of checkdam across Veda river near Devanur | Chicka magalur | Kadur | 88.00 | 82.00 | 1.07 |
| 5 | Construction of checkdam across Kallaluholehalla near Geddlehalli. | Chicka magalur | Kadur | 137.00 | 126.00 | 1.09 |
| | **Total** | | | **476.00** | | |

**Government Order No. SANEEYEE 236 MASAVI 2009 (2), Bangalore, dated: 16.09.2010**

In view of the above, the Administrative approval is hereby accorded for taking up the above works with an estimated cost totaling to ₹ .476.00 lakhs (Four hundred and seventy six lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90: 10 between the Central Govt and State Govt.
4. The Central share is in the form of grant to the state.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in their note No.PWD-890-FC-1/2009 dated 09.12.2009.

By Order and in the name of the Governor of Karnataka,

**RUDRAMURTHY**

Ex officio Under Secretary to Government

P.R. 2451 Water Resources Department (Minor Irrigation)

## WATER RESOURCES SECRETARIAT

**Subject :** According Administrative Approval to the Minor Irrigation Projects under Accelerated Irrigation Benefit Programme-Regarding.

**Read :** Letter No. CEMI (S)/ TA-2/ AE-2/Mysore/ AIBP/ 2010-11/2559/ Hassan/ Mysore / A.I.B.P./ 2010/2559, dt. 23.08.2010, from the Chief Engineer, Minor Irrigation South Zone, Bangalore.

**PREAMBLE:**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category states. 81 taluks in the state are approved under Drought prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit

**ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿ/ಉಪ ವಿಭಾಗಾಧಿಕಾರಿಗಳಿಂದ ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು ಪಾವತಿಸಲು ಕ್ರಮ ಕೈಗೊಳ್ಳುವುದು. ಖಾತರಿಯಾಗದಿದಲ್ಲಿ, ಸದರಿ ಮೊತ್ತವನ್ನು ಒಂದು ತಿಂಗಳೊಳಗಾಗಿ ತಪ್ಪದೆ ಸರ್ಕಾರಕ್ಕೆ ಹಿಂದಿರುಗಿಸಲು ಕ್ರಮ ತೆಗೆದುಕೊಳ್ಳುವುದು.**

4. ಸರ್ಕಾರದ ಆದೇಶ ಸಂ:ಗ್ರಾಅಪ.15ಆರ್‌ಬಿಎಲ್. 2004 ದಿನಾಂಕ: 21.01.2006ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

5. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 197 ಬಿಎಸ್. 2010 ದಿನಾಂಕ: 13.09.2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಎಸ್.ಪ್ರಸನ್ನಕುಮಾರ್**
ನಿರ್ದೇಶಕರು
ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ
ಯೋಜನೆ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಪಿ.ಆರ್. 2462 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ **ರಾಮನಗರ** ಜಿಲ್ಲೆಯ ಎಂಟು ಜನ ಜೀತ ವಿಮುಕ್ತರಿಗೆ 2010–11ನೇ ಸಾಲಿನಲ್ಲಿ ಪೂರ್ಣ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ: ಗ್ರಾಅಪ. 15.ಆರ್‌ಬಿಎಲ್.2004 ದಿನಾಂಕ: 21.01.2006

2. ತಹಶೀಲ್ದಾರ್ ಹಾಗೂ ತಾಲ್ಲೂಕು ನ್ಯಾಯಾಧೀಶರು ಕನಕಪುರ ತಾಲ್ಲೂಕು ರಾಮನಗರ ಜಿಲ್ಲೆ ಇವರು ನೀಡಿರುವ ದಿನಾಂಕ:09–10–2009 ರಂದು ನೀಡಿರುವ ಜೀತ ವಿಮುಕ್ತ ಬಿಡುಗಡೆ ಪ್ರಮಾಣ ಪತ್ರ.

3. ಇಂಟರ್ ನ್ಯಾಷನಲ್ ಜಸ್ಟೀಸ್ ಮಿಷನ್ (ಐ.ಜೆ.ಎಂ) ಕಲ್ಯಾಣ ನಗರ, ಬೆಂಗಳೂರು ಇವರು ಸರ್ಕಾರಕ್ಕೆ ವರದಿ ಮಾಡಿರುವ ದಿನಾಂಕ: 04.06.10 ಹಾಗೂ ದಿನಾಂಕ: 22.06.10

**ಪ್ರಸ್ತಾವನೆ:**

ಜೀತ ಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21.01.2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ: 21.01.2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು **ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.**

ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ತಹಶೀಲ್ದಾರ್ ಹಾಗೂ ತಾಲ್ಲೂಕು ನ್ಯಾಯಾಧೀಶರು ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ಇವರು, ರಾಮನಗರ ಜಿಲ್ಲೆಯ, ಕನಕಪುರ ತಾಲ್ಲೂಕಿನ ಈ ಕೆಳಕಂಡ ಎಂಟು ಜನ ಜೀತವಿಮುಕ್ತರು ಕ್ರಮವಾಗಿ **(i) ಅಲ್ಲಾಸಂದ್ರ ಗ್ರಾಮದ ಜೆಎಂಐ (JMI) ಇಟ್ಟಿಗೆ ಕಾರ್ಖಾನೆಯ ಮಾಲೀಕರಾದ ಶ್ರೀ ಕಾಂತರಾಜು** ಇವರ ಬಳಿ ಕೊಳಕಂಡಹಳ್ಳಿ ಗ್ರಾಮದ ವಾಸಿಗಳಾದ 1) ಚಿನ್ನಪ್ಪ (ಅಕ್ಕ ಮದುರಯ್ಯ) S/o ಯಲ್ಲಪ್ಪ 2) ರಾಮಕ್ಕ W/o ಚಿನ್ನಪ್ಪ 3) ಹನುಮರಾಜ್ S/o ರಾಮಯ್ಯ 4) ಲಕ್ಷ್ಮಿ W/o ಹನುಮರಾಜ್ ಇವರು ಒತ್ತೆಯಾಳುಗಳಾಗಿರುವುದನ್ನು ಹಾಗಾ **(ii) ರಾಯಸಂದ್ರ ಗ್ರಾಮದ ಎಸ್‌ಬಿಡಬ್ಲ್ಯೂ (SBW) ಇಟ್ಟಿಗೆ ಕಾರ್ಖಾನೆಯ ಮಾಲೀಕರಾದ ಶ್ರೀ ಸತೀಸ್ ಇವರ ಬಳಿ** ಬಿಜಿಹಳ್ಳಿ ಗ್ರಾಮದ 1) ಬಸವರಾಜು S/o ಕುನಪ್ಪ, 2) ಕೆಂಪಮ್ಮ W/o ಬಸವರಾಜು ಹೊಸದುರ್ಗ ಗ್ರಾಮದ 3) ಶಿವಮ್ಮ W/o ನಾಗ ಮತ್ತು ಹುಣಸೆಮರದ ದೊಡ್ಡಿ ಗ್ರಾಮದ 4) ಮಹಾದೇವಮ್ಮ W/o ಸ್ವಾಮಿ ಎಂಬ ಮೇಲ್ಕಂಡ ಜೀತ ವಿಮುಕ್ತರು ಒತ್ತೆಯಾಳುಗಳಾಗಿರುವುದನ್ನು ಪತ್ತೆ ಹಚ್ಚಿ, ಜೀತದಾಳು ವಿಮೋಚನಾ ಕಾಯಿದೆ 1976ರಡಿ ತಪ್ಪಿತಸ್ಥರ ವಿರುದ್ಧ ಪ್ರಕರಣ ದಾಖಲಿಸಿಕೊಂಡು, ದಿ: 09.10.2009 ರಂದು ಜೀತಪದ್ಧತಿಯಿಂದ ವಿಮುಕ್ತಿಗೊಳಿಸಿ, ಜೀತವಿಮುಕ್ತ ಪ್ರಮಾಣ ಪತ್ರವನ್ನು ಹೊರಡಿಸಿದ್ದು, ಈ ಕುರಿತು ಮಾಹಿತಿಯನ್ನು ಸಂಗ್ರಹಿಸಿದ, ಇಂಟರ್ ನ್ಯಾಷನಲ್ ಜಸ್ಟೀಸ್ ಮಿಷನ್‌ರವರು ಸದರಿ ಜೀತ ವಿಮುಕ್ತರಿಗೆ ಪುನರ್ವಸತಿ ಸಹಾಯಧನ ಕಲ್ಪಿಸಿಕೊಡಲು ಉಲ್ಲೇಖ (3)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಈ ಕುರಿತಾಗಿ ಖಚಿತ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ತಮ್ಮ ಜಿಲ್ಲಾ ಪಂಚಾಯಿತಿಯನ್ನು ಕೋರಿದ್ದು, ತಮ್ಮಿಂದ ಸೂಕ್ತ ವರದಿಯು ಸಕಾಲದಲ್ಲಿ ಸ್ವಿಕೃತವಾಗದೆ ಇರುವುದರಿಂದ ಸದರಿ ಜೀತ ವಿಮುಕ್ತರಿಗೆ ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನವನ್ನು ತಕ್ಷಣದಿಂದಲೇ ಕಲ್ಪಿಸಿಕೊಡಲು ಮನಗಂಡು, ಉಲ್ಲೇಖ (3)ರ ಪತ್ರದೊಂದಿಗೆ ಸಲ್ಲಿಸಲಾದ ಜೀತ ವಿಮುಕ್ತ ಬಿಡುಗಡೆ ಪ್ರಮಾಣ ಪತ್ರಗಳನ್ನು ಆಧರಿಸಿ ಸದರಿ ಎಂಟು ಜನ ಜೀತ ವಿಮುಕ್ತರಿಗೆ ನವೆಂಬರ್ 2009 ರಿಂದ ಅನ್ವಯವಾಗುವಂತೆ ಅಕ್ಟೋಬರ್ 2011ರ ವರೆಗೆ 24 ತಿಂಗಳುಗಳವರೆಗೆ, ರೂ 300/–ಗಳ ಮಾಶಾಸನ ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಸದರಿ ಅವಧಿಯ ಒಟ್ಟು 24 ತಿಂಗಳಿಗೆ ಪ್ರತಿಯೊಬ್ಬರಿಗೆ ರೂ. 7,200/– ರಂತೆ ರೂ.57,600/– ರೂಗಳನ್ನು ಎಂಟು ಜನ ಜೀತ ವಿಮುಕ್ತರಿಗೆ ಬಿಡುಗಡೆ ಮಾಡಲು ಈ ಯೋಜನೆಯಡಿ ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 2230–01–198–6–01–300 ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ :ಗ್ರಾಅಪ.1.ಆರ್‌ಬಿಎಲ್.2010 (ರಾ) ಬೆಂಗಳೂರು, ದಿನಾಂಕ : 20.09.2010**

ಜೀತ ವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಎಂಟು ಜನ ಜೀತವಿಮುಕ್ತರಿಗೆ 2010–11ನೇ ಸಾಲಿನಲ್ಲಿ ಒಟ್ಟು 24 ತಿಂಗಳ ಅವಧಿಗೆ (ನವೆಂಬರ್ 2009 ರಿಂದ ಅಕ್ಟೋಬರ್ 2011ರ ವರೆಗೆ) ತಗಲುವ ಮಾಹೆಯಾನ ರೂ. 300.00ರಂತೆ ಸಹಾಯಧನ ಪಾವತಿಸಲು ಒಟ್ಟು ರೂ.57,600 (ಐವತ್ತೇಳು ಸಾವಿರದ ಆರುನೂರು ರೂಪಾಯಿಗಳು ಮಾತ್ರ)ಗಳನ್ನು ಈ ಸಾಲಿನಲ್ಲಿಯೇ ರಾಮನಗರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

**3. ಈ ಆದೇಶದಲ್ಲಿ ನಮೂದಿಸಿರುವ ಜೀತ ವಿಮುಕ್ತರ ವಿವರಗಳನ್ನು ಐಜಿಎಂ ರವರ ವರದಿಯ ಆಧಾರದಂತೆ ಪರಿಗಣಿಸಿ, ಜೀತ ವಿಮುಕ್ತರಿಗೆ ತಕ್ಷಣದಿಂದಲೇ ಪರಿಹಾರ ನೀಡುವ ಅಗತ್ಯತೆ ಹಿನ್ನೆಲೆಯಲ್ಲಿ ಮಾಶಾಸನ ಮೊತ್ತವನ್ನು ಮಂಜೂರು ಮಾಡಲಾಗಿದ್ದು, ಸದರಿ ಜೀತ ವಿಮುಕ್ತರ ಇರುವಿಕೆಯ ಬಗ್ಗೆ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿ / ಉಪ ವಿಭಾಗಾಧಿಕಾರಿಗಳಿಂದ ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು ಪಾವತಿಸಲು ಕ್ರಮ ಕೈಗೊಳ್ಳುವುದು. ಖಾತರಿಯಾಗದಿದಲ್ಲಿ, ಸದರಿ ಮೊತ್ತವನ್ನು ಒಂದು ತಿಂಗಳೊಳಗಾಗಿ ತಪ್ಪದೆ ಸರ್ಕಾರಕ್ಕೆ ಹಿಂದಿರುಗಿಸಲು ಕ್ರಮ ತೆಗೆದುಕೊಳ್ಳುವುದು.**

4. ಸರ್ಕಾರದ ಆದೇಶ ಸಂ:ಗ್ರಾಅಪ.15ಆರ್‌ಬಿಎಲ್. 2004 ದಿನಾಂಕ: 21.01.2006ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

5. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 197 ಪಿಬಿಎಸ್. 2010 ದಿನಾಂಕ: 13.09.2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಎಸ್.ಪ್ರಸನ್ನಕುಮಾರ್**
ನಿರ್ದೇಶಕರು
ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ
ಯೋಜನೆ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್.2463

## ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ರಾಜ್ಯವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾವಣೆಯಾದ ಕಾರ್ಯಕ್ರಮಗಳಡಿ ಉಪಕಾರ್ಯಕ್ರಮಗಳವಾರು ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ಯೋ(2):ಶುಲ್ಕ ಮರುಪಾವತಿ 01/2010–11, ದಿನಾಂಕ: 27.07.2010.

**ಪ್ರಸ್ತಾವನೆ :**

(1) ಮೇಲೆ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರದಲ್ಲಿ 2010–11ನೇ ಸಾಲಿನಲ್ಲಿ, ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಲಾದ

ಎ) ಸಾರ್ವಜನಿಕ ಪ್ರಾಥಮಿಕ ಶಿಕ್ಷಣ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕಶೀರ್ಷಿಕೆ: 2202–01–800–1–35ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

[ಅ] ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ [6 ಮತ್ತು 7ನೇ ತರಗತಿ ಎಸ್.ಸಿ / ಎಸ್.ಟಿ ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣುಮಕ್ಕಳು] ಸರ್ಕಾರೇತರ ಶುಲ್ಕ ಮರುಪಾವತಿ.

[ಆ] ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

[ಇ] ಹೊಸ ಬಿ.ಇ.ಓ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

[ಈ] ಅಕ್ಷರ ದಾಸೋಹ ಕಾರ್ಯಕ್ರಮ.

ಬಿ) ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05 ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

[ಅ] ಎಸ್.ಎಸ್.ಎಲ್.ಸಿ ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ

[ಆ] ಸರ್ಕಾರೇತರ ಶುಲ್ಕ ಎಲ್ಲಾ ಸಾಮಾನ್ಯ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ/ಎಸ್.ಟಿ ಗಂಡು ಮಕ್ಕಳಿಗೆ (8,9, ಮತ್ತು 10ನೇ ತರಗತಿ)

ಮೇಲ್ಕಂಡ ಎರಡು ಯೋಜನಾ ಕಾರ್ಯಕ್ರಮಗಳಿಗೆ ವಿವಿಧ ಜಿಲ್ಲೆಗಳಿಗೆ ಹಂಚಿಕೆ ಮಾಡಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ:221 ಯೋಯೋಕ 2010 ಬೆಂಗಳೂರು, ದಿನಾಂಕ: 15–09–2010**

**[ಇಡಿ: 109: ಸ್ವೀಮರ (ಯುನಿಕ್), ದಿನಾಂಕ: 15.09.2010]**

(3) 2010–11ನೇ ಸಾಲಿಗೆ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ಲಿಂಕ್ ಡಾಕ್ಯುವೆಂಟ್‌ನಲ್ಲಿ ಒದಗಿಸಲಾದ

ಎ) ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕಶೀರ್ಷಿಕೆ: 2202–01–800–1–35 (ಯೋಜನೆ)ರಡಿಯಲ್ಲಿನ ಅನುದಾನವನ್ನು ಈ ಕೆಳಕಂಡಂತೆ ಉಪ ಕಾರ್ಯಕ್ರಮಗಳಿಗೆ ಅನುಬಂಧ–1ರಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

[ಅ] ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ [6 ಮತ್ತು 7ನೇ ತರಗತಿ ಎಸ್.ಸಿ / ಎಸ್.ಟಿ ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣುಮಕ್ಕಳು] ಸರ್ಕಾರೇತರ ಶುಲ್ಕ ಮರುಪಾವತಿ.

[ಆ] ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

[ಇ] ಹೊಸ ಬಿ.ಇ.ಓ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

[ಈ] ಅಕ್ಷರ ದಾಸೋಹ ಕಾರ್ಯಕ್ರಮ.

ಬಿ) ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05 ರಡಿಯಲ್ಲಿನ ಅನುದಾನವನ್ನು ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಅನುಬಂಧ–2ರಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

[ಅ] ಎಸ್.ಎಸ್.ಎಲ್.ಸಿ ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ

[ಆ] ಸರ್ಕಾರೇತರ ಶುಲ್ಕ ಎಲ್ಲಾ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ/ಎಸ್.ಟಿ ಗಂಡು ಮಕ್ಕಳಿಗೆ (8,9, ಮತ್ತು 10ನೇ ತರಗತಿ)

(4) ಪ್ರತಿ ಮಾಹೆಯೂ ಎಂ.ಎಂ.ಆರ್ ವರದಿಯಲ್ಲಿ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

(5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 1591 ಐಎಫ್ (ಬಿ&ಎ) 2010, ದಿನಾಂಕ: 12–08–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್.ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ).

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 221: ಯೋಯೋಕ 2010 ಬೆಂಗಳೂರು, ದಿನಾಂಕ: 15.09.2010ಕ್ಕೆ ಅನುಬಂಧ–1**

| ಕ್ರ.ಸಂ | ಜಿಲ್ಲೆಯ ಹೆಸರು | ಲಿಂಕ್‌ಡಾಕ್ಯುಮೆಂಟ್‌ನಲ್ಲಿ ಒದಗಿಸಿದ ಅನುದಾನ | ಸ.ಹಿ.ಪ್ರಾ.ಶಾ.ಸರ್ಕಾರೇತರ ಶುಲ್ಕ ಮರು ಪಾವತಿ 6 ಮತ್ತು 7ನೇ ತರಗತಿ ಎಸ್.ಸಿ.ಎಸ್.ಟಿ ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು | ಬಾಡಿಗೆ ಸೌಲಭ್ಯ (ಉಪನಿರ್ದೇಶಕರ ಕಛೇರಿಗಳಿಗೆ) | ಬಾಡಿಗೆ ವಾಹನ ಸೌಲಭ್ಯ (ಬಿ.ಇ.ಓ ಕಛೇರಿಗಳಿಗೆ) | ಅಕ್ಷರ ದಾಸೋಹ |
|---|---|---|---|---|---|---|
| 1 | ಬೆಂಗಳೂರು ಉತ್ತರ | 1000.00 | 5.00 | 0.00 | 2.40 | 992.60 |
| 2 | ಬೆಂಗಳೂರು ದಕ್ಷಿಣ | 1090.00 | 97.60 | 5.00 | 0.00 | 987.40 |
| 3 | ಬೆಂಗಳೂರು ಗ್ರಾ | 800.00 | 7.00 | 0.00 | 0.00 | 793.00 |
| 4 | ರಾಮನಗರ | 850.00 | 10.00 | 0.00 | 0.00 | 840.00 |
| 5 | ಕೋಲಾರ | 1301.64 | 9.50 | 0.00 | 0.00 | 1292.14 |
| 6 | ಚಿಕ್ಕಬಳ್ಳಾಪುರ | 1032.00 | 6.00 | 3.00 | 0.00 | 1023.00 |
| 7 | ತುಮಕೂರು | 1572.84 | 408.89 | 0.00 | 0.00 | 1163.95 |
| 8 | ಮಧುಗಿರಿ | 1000.00 | 800.00 | 0.00 | 0.00 | 200.00 |
| 9 | ಶಿವಮೊಗ್ಗ | 1464.00 | 6.68 | 0.00 | 0.00 | 1457.32 |
| 10 | ಚಿತ್ರದುರ್ಗ | 1576.00 | 15.00 | 0.00 | 0.00 | 1561.00 |
| 11 | ದಾವಣಗೆರೆ | 1813.33 | 12.00 | 0.00 | 0.00 | 1801.33 |
| 12 | ಮೈಸೂರು | 1795.28 | 20.00 | 0.00 | 5.00 | 1770.28 |
| 13 | ಚಾಮರಾಜನಗರ | 954.74 | 10.74 | 0.00 | 10.00 | 934.00 |
| 14 | ಮಂಡ್ಯ | 1508.00 | 12.00 | 0.00 | 3.44 | 1492.56 |
| 15 | ಹಾಸನ | 1435.00 | 11.00 | 0.00 | 0.00 | 1424.00 |
| 16 | ಚಿಕ್ಕಮಂಗಳೂರು | 1112.00 | 6.00 | 0.00 | 2.40 | 1103.60 |
| 17 | ಕೊಡಗು | 435.00 | 1.76 | 0.00 | 0.00 | 433.24 |
| 18 | ದಕ್ಷಿಣ ಕನ್ನಡ | 1552.00 | 5.00 | 0.00 | 0.00 | 1547.00 |
| 19 | ಉಡುಪಿ | 758.00 | 3.50 | 0.00 | 1.80 | 752.70 |
| 20 | ಬೆಳಗಾಂ | 1983.00 | 37.15 | 0.00 | 0.00 | 1945.85 |
| 21 | ಚಿಕ್ಕೋಡಿ | 1983.00 | 21.50 | 4.00 | 2.50 | 1955.00 |

| | | | | | | |
|---|---|---|---|---|---|---|
| 22 | ಬಿಜಾಪುರ | 2050.20 | 15.00 | 0.00 | 2.40 | 2032.80 |
| 23 | ಬಾಗಲಕೋಟೆ | 1330.00 | 15.00 | 0.00 | 2.40 | 1312.60 |
| 24 | ಧಾರವಾಡ | 1104.00 | 6.10 | 0.00 | 2.40 | 1095.50 |
| 25 | ಗದಗ | 1050.00 | 6.00 | 0.00 | 0.00 | 1044.00 |
| 26 | ಹಾವೇರಿ | 1301.61 | 16.00 | 0.00 | 0.00 | 1285.61 |
| 27 | ಉತ್ತರ ಕನ್ನಡ | 1450.00 | 8.25 | 0.00 | 0.00 | 1441.75 |
| 28 | ಗುಲ್ಬರ್ಗಾ | 2080.80 | 10.50 | 0.00 | 0.00 | 2070.30 |
| 29 | ಯಾದಗಿರಿ | 797.13 | 8.00 | 0.00 | 0.00 | 789.13 |
| 30 | ಬಳ್ಳಾರಿ | 1955.80 | 14.75 | 0.00 | 0.00 | 1941.05 |
| 31 | ರಾಯಚೂರು | 1200.00 | 10.00 | 0.00 | 0.00 | 1190.00 |
| 32 | ಕೊಪ್ಪಳ | 1301.61 | 50.00 | 0.00 | 0.00 | 1251.61 |
| 33 | ಬೀದರ್ | 1449.00 | 20.00 | 0.00 | 0.00 | 1429.00 |
| | **ಒಟ್ಟು** | **44085.98** | **1685.92** | **12.00** | **34.74** | **42353.32** |

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 221: ಯೋಯೋಕ 2010 ಬೆಂಗಳೂರು, ದಿನಾಂಕ: 15.09.2010ಕ್ಕೆ ಅನುಬಂಧ–2**

| ಕ್ರ.ಸಂ. | ಜಿಲ್ಲೆಯ ಹೆಸರು | ಲಿಂಕ್‌ಡಾಕ್ಯುಮೆಂಟ್‌ನಲ್ಲಿ ಒದಗಿಸಿದ ಆಯವ್ಯಯ | ಎಸ್.ಎಸ್.ಎಲ್.ಸಿ ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ | ಸರ್ಕಾರೇತರ ಶುಲ್ಕ ಎಲ್ಲಾ ಹೆಣ್ಣು ಮಕ್ಕಳು ಹಾಗೂ ಎಸ್.ಸಿ/ಎಸ್.ಟಿ ಗಂಡು ಮಕ್ಕಳು (8.9 ಮತ್ತು 10ನೇ ತರಗತಿ) |
|---|---|---|---|---|
| 1 | ಬೆಂಗಳೂರು ಉತ್ತರ | 40.00 | 3500000.00 | 500000.00 |
| 2 | ಬೆಂಗಳೂರು ದಕ್ಷಿಣ | 35.00 | 3000000.00 | 500000.00 |
| 3 | ಬೆಂಗಳೂರು ಗ್ರಾ | 31.92 | 2102048.00 | 1089952.00 |
| 4 | ರಾಮನಗರ | 16.00 | 1400000.00 | 200000.00 |
| 5 | ಕೋಲಾರ | 32.24 | 1224000.00 | 2000000.00 |
| 6 | ಚಿಕ್ಕಬಳ್ಳಾಪುರ | 40.00 | 3983806.00 | 16194.00 |
| 7 | ತುಮಕೂರು | 20.00 | 1600000.00 | 400000.00 |
| 8 | ಮಧುಗಿರಿ | 16.00 | 1400000.00 | 200000.00 |
| 9 | ಶಿವಮೊಗ್ಗ | 43.16 | 3338292.00 | 977708.00 |
| 10 | ಚಿತ್ರದುರ್ಗ | 44.00 | 4216250.00 | 183750.00 |
| 11 | ದಾವಣಗೆರೆ | 42.00 | 1750000.00 | 2450000.00 |
| 12 | ಮೈಸೂರು | 78.53 | 6471020.00 | 1381980.00 |
| 13 | ಚಾಮರಾಜನಗರ | 16.72 | 1472000.00 | 200000.00 |
| 14 | ಮಂಡ್ಯ | 80.00 | 3450617.00 | 4549383.00 |
| 15 | ಹಾಸನ | 50.00 | 4141490 | 858510.00 |
| 16 | ಚಿಕ್ಕಮಂಗಳೂರು | 45.00 | 2450000.00 | 2050000.00 |
| 17 | ಕೊಡಗು | 15.00 | 855251.00 | 644749.00 |
| 18 | ದಕ್ಷಿಣ ಕನ್ನಡ | 45.83 | 2579431.00 | 2003569.00 |
| 19 | ಉಡುಪಿ | 33.00 | 1900000.00 | 1400000.00 |
| 20 | ಬೆಳಗಾಂ | 27.37 | 2289940.00 | 447060.00 |
| 21 | ಚಿಕ್ಕೋಡಿ | 20.00 | 1800000.00 | 200000.00 |
| 22 | ಬಿಜಾಪುರ | 34.35 | 2810799.00 | 624201.00 |
| 23 | ಬಾಗಲಕೋಟೆ | 18.56 | 1656000.00 | 200000.00 |
| 24 | ಧಾರವಾಡ | 17.00 | 1500000.00 | 200000.00 |
| 25 | ಗದಗ್ | 31.20 | 2913000.00 | 207000.00 |
| 26 | ಹಾವೇರಿ | 36.00 | 2444926.00 | 1155074.00 |
| 27 | ಉತ್ತರ ಕನ್ನಡ | 20.69 | 1600490.00 | 468510.00 |
| 28 | ಗುಲ್ಬರ್ಗಾ | 58.76 | 4831078.00 | 1044922.00 |
| 29 | ಯಾದಗಿರಿ | 38.00 | 2012982.00 | 1787018.00 |

| | | | | |
|---|---|---|---|---|
| 30 | ಬಳ್ಳಾರಿ | 77.00 | 4966763.00 | 2733237.00 |
| 31 | ರಾಯಚೂರು | 45.00 | 3455394.00 | 1044606.00 |
| 32 | ಕೊಪ್ಪಳ | 36.00 | 2750949.00 | 849051.00 |
| 33 | ಬೀದರ್ | 48.00 | 4500000.00 | 300000.00 |
| | ಒಟ್ಟು | 1232.33 | 90366526.00 | 32866474.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್.ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ).

ಪಿ.ಆರ್. 2464

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ವಿರುದ್ಧದ ಆರೋಪಗಳಿಗೆ ವಿಚಾರಣೆ ನಡೆಸಲು ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14ಎ ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ– ಆದೇಶ.

**ಓದಲಾಗಿದೆ :** 1) ಅಪರ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ–127/97–98/ಎಆರ್ಇ–5, ದಿನಾಂಕ: 28–11–2006 ಮತ್ತು 29–05–2010.

2) ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ: ಸಿಆಸುಇ 452 ಎಸ್ಇಎನ್ 2006, ದಿನಾಂಕ: 03–07–2010.

3) ಅಪರ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಂಪ್ಲೆಟ್/ಲೋಕ್:ಬಿಸಿಡಿ–127/97–98:ಎಆರ್ಇ–5, ದಿನಾಂಕ: 23.07.2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.11.2006ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ನಿಬಂಧಕರು, ವಿಚಾರಣೆಗಳು–5 ಇವರು ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3) ರಡಿಯಲ್ಲಿ, ತಯಾರಿಸಲಾದ ತನಿಖಾ ವರದಿ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ–127/97–98/ಎಆರ್ಇ–5, ದಿನಾಂಕ: 23–11–2006ನ್ನು ಸರ್ಕಾರಕ್ಕೆ ಒದಗಿಸಿ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನಂತೆ ಕ್ರಮಕೈಗೊಂಡು ಸರ್ಕಾರದ ನಿರ್ಣಯವನ್ನು ತಿಳಿಸುವಂತೆ ಕೋರಿದ್ದಾರೆ.

ಮಾನ್ಯ ಲೋಕಾಯುಕ್ತರು ತಮ್ಮ ತನಿಖಾ ವರದಿಯಲ್ಲಿ ಬೆಂಗಳೂರಿನ ಶ್ರೀ ಮಲ್ಲಿಕಾರ್ಜುನಯ್ಯ ಎಂಬವವರು ಕರ್ನಾಟಕ ಲೋಕಾಯುಕ್ತಕ್ಕೆ ನೀಡಿದ ದೂರಿನಲ್ಲಿ ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು), ಶಿಕ್ಷಣ ಇಲಾಖೆ, ಇವರು ಈ ಹಿಂದೆ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖಾ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ಮಾಡಿರುವ ಹಲವಾರು ದೂರುಗಳಲ್ಲಿ ಸದರಿಯವರು ಅನಾವಶ್ಯಕವಾಗಿ ರೂ. 50,000/– ಮೊತ್ತವನ್ನು ಎ.ಸಿ.ಬಿಲ್ ಮೂಲಕ ಡ್ರಾ ಮಾಡಿ ಯಾವುದೇ ಸಾಮಗ್ರಿ ಖರೀದಿಗೆ ಉಪಯೋಗಿಸದೇ ಅಥವಾ ಸರ್ಕಾರದ ಲೆಕ್ಕಕ್ಕೆ ಜಮಾ ಮಾಡದೇ ತಡೆ ಹಿಡಿದಿರುವ ಮತ್ತು ಎನ್.ಡಿ.ಸಿ ಬಿಲ್ಲನ್ನು ನಿಗದಿತ ಸಮಯದೊಳಗೆ ಒಪ್ಪಿಸದೇ ಅನಾವಶ್ಯಕವಾಗಿ ವಿಳಂಬ ಮಾಡಿರುತ್ತಾರೆಂದು ಸದರಿಯವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಯೋಗ್ಯವಾದ ಪ್ರಕರಣವೆಂದು ನಿರ್ಣಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಅನ್ವಯ ವಿಚಾರಣೆಗಾಗಿ ಲೋಕಾಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿದ್ದರು.

ಮಾನ್ಯ ಲೋಕಾಯುಕ್ತರು ನಿಯಮ 12(3)ರಡಿಯಲ್ಲಿ ಸಲ್ಲಿಸಲಾದ ವರದಿಯಲ್ಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಇವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಪೂರ್ಣ ಪ್ರಮಾಣದ ವಿಚಾರಣೆಯಿಂದ ತಿಳಿಯುವ ಅನಿವಾರ್ಯತೆಯನ್ನು ಮನಗಂಡು ಮೇಲೆ ಓದಲಾದ (2)ರ ದಿನಾಂಕ: 03.07.2010ರ ಸೇರ್ಪಡೆ ಆದೇಶದಲ್ಲಿ ಈ ಪ್ರಕರಣವನ್ನೂ ಸಹ ಈ ಹಿಂದೆ ಹೊರಡಿಸಲಾದ ಆದೇಶದ ಸಂಖ್ಯೆ: ಸಿಆಸುಇ 452 ಎಸ್ಇಎನ್ 2006, ದಿನಾಂಕ:: 04.07.2007ಕ್ಕೆ ಸೇರ್ಪಡೆ ಮಾಡಿ ವಿಚಾರಣೆ ನಡೆಸುವಂತೆ ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 23.07.2010ರ ಪತ್ರದಲ್ಲಿ ಅಪರ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಈಗಾಗಲೇ ದಿನಾಂಕ: 04.07.2007ರಲ್ಲಿ ಹೊರಡಿಸಿರುವ ವಿಚಾರಣೆಯು / ಪೂರ್ಣಗೊಂಡಿರುವುದರಿಂದ ಅದರೊಂದಿಗೆ ಈ ಪ್ರಕರಣವನ್ನು ಸೇರ್ಪಡೆ ಮಾಡಿ ವಿಚಾರಣೆ ನಡೆಸಲು ಸಾಧ್ಯವಿರುವುದಿಲ್ಲವೆಂದು ತಿಳಿಸುತ್ತಾ. ಈ ಬಗ್ಗೆ ಕಾನೂನು ರೀತ್ಯಾ ಮುಂದಿನ ಕ್ರಮ ವಹಿಸಲು ಕೋರಿದ್ದಾರೆ. ಸದರಿ ಕೋರಿಕೆಯನ್ನು ಸರ್ಕಾರ ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 452 ಎಸ್ಇಎನ್ 2006, ಬೆಂಗಳೂರು, ದಿನಾಂಕ: 15–09–2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಮೇಲೆ (2)ರಲ್ಲಿ ಓದಲಾಗಿರುವ ಸೇರ್ಪಡೆ ಆದೇಶವನ್ನು ರದ್ದುಗೊಳಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ಮೇಲಿನ ಮೇಲ್ಕಂಡ ಆರೋಪಗಳ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–3)

ಪಿ.ಆರ್. 2465

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2006, ದಿನಾಂಕ: 26–09–2006.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 460 ಸಅಸೇ 2007, ದಿನಾಂಕ: 25–02–2008.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಿಶಾಸೇ 2008, ದಿನಾಂಕ: 23–05–2008.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಿಶಾಸೇ 2009, ದಿನಾಂಕ: 25–04–2009.
5. ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 193 ಸಮಯ 07, (ಭಾಗ–1), ದಿನಾಂಕ: 10–08–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಲೆಕ್ಕಾಧೀಕ್ಷಕರು ಹಾಗೂ ಇತರ ಹುದ್ದೆಗಳನ್ನು ಖಾಯಂಗೊಳಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಒಂದು ಲೆಕ್ಕಾಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ಮತ್ತು (4) ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಲೆಕ್ಕಾಧಿಕಾರಿ ಹುದ್ದೆಯನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನಾಗಿ ಉನ್ನತೀಕರಿಸಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯಲ್ಲಿನ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ: 25–02–2009 ರಿಂದ 24–02–2011 ರವರೆಗೆ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯನ್ನು ದಿನಾಂಕ: 25–05–2010 ರಿಂದ 24–05–2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಸಅಸೇ 2010, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2010**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ: 25–02–2009 ರಿಂದ 24–02–2011 ರವರೆಗೆ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯನ್ನು ದಿನಾಂಕ: 25–05–2010 ರಿಂದ 24–05–2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಅದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಅರ್ಥಿಕ ಇಲಖೆ ಸಹಮಿತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 2466 (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ, ಇಲ್ಲಿನ ಉಪ ನಿವಾಸಿ ಆಯುಕ್ತರ ಹುದ್ದೆಯನ್ನು ಅಪರ ನಿವಾಸಿ ಆಯುಕ್ತರ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 259 ಸಅಸೇ 2010, ದಿನಾಂಕ: 23–06–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ: 05–03–2005 ರ ಅಧಿಸೂಚನೆಯಲ್ಲಿ ಶ್ರೀ ಹೆಚ್.ಹೆಚ್.ಸೇಠ್, ಸರ್ಕಾರದ ಅಪರ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಅಪರ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ–ಶ್ರೀ ವೈ.ಸಿ ಶಿವಕುಮಾರ್, ಉಪನಿವಾಸಿ ಆಯುಕ್ತರು ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಆದ್ದರಿಂದ ಕರ್ನಾಟಕ ಭವನ, ನವದೆಹಲಿ ಇಲ್ಲಿನ ಉಪ ನಿವಾಸಿ ಆಯುಕ್ತರ ಹುದ್ದೆಯನ್ನು ಅಪರ ನಿವಾಸಿ ಆಯುಕ್ತರ ಹುದ್ದೆಗೆ ಉನ್ನತೀಕರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 259 ಸಅಸೇ 2010, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್ 2010.**

ನವದೆಹಲಿಯ ಕರ್ನಾಟಕ ಭವನದ ಉಪ ನಿವಾಸಿ ಆಯುಕ್ತರ ಹುದ್ದೆಯನ್ನು ಶ್ರೀ ಹೆಚ್.ಹೆಚ್.ಸೇಠ್, ಸರ್ಕಾರದ ಅಪರ ಕಾರ್ಯದರ್ಶಿ, ಇವರು ಸದರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ಅವಧಿಯವರೆಗೆ ಅಪರ ನಿವಾಸಿ ಆಯುಕ್ತರ ವೃಂದಕ್ಕೆ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 20–07–2010ರ ಟಿಪ್ಪಣಿ ಸಂಖ್ಯೆ: "ಆಇ 1123 ಸೇ–3/2010" ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2467 ಸಿಆಸು ಇಲಾಖೆ (ಸೇವೆಗಳು–3)

## ಯುವಜನ ಸೇವಾ ಸಚಿವಾಲಯ

## ತಿದ್ದೋಲೆ

**ಸಂಖ್ಯೆ ಯುಸೇಇ 53 ಯುಇಸೇ 2010 ಬೆಂಗಳೂರು, ದಿನಾಂಕ: 20–09–2010.**

ಶ್ರೀಮತಿ ಕೆ.ಎಂ. ನಾಗರತ್ನ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ರಾಜೀನಾಮೆ ಅಂಗೀಕರಿಸಲ್ಪಟ್ಟ ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 3 ಯುಇಸೇ 2007 ದಿನಾಂಕ: 06–09–2007ರಲ್ಲಿನ ಪ್ರಸ್ತಾವನೆಯ ಮೊದಲ ಕಂಡಿಕೆ 5ನೇ ಸಾಲಿನಲ್ಲಿ "ನವೆಂಬರ್ 12, 2007" ಎಂದಿರುವುದನ್ನು "ನವೆಂಬರ್ 8, 2006" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಮೊದಲ ಕಂಡಿಕೆ 7ನೇ ಸಾಲಿನಲ್ಲಿ 03–04–1990ರ ನಂತರದ ಒಕ್ಕಣೆಗಳನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

"ಪ್ರಕಾರ ದಿನಾಂಕ: 30–12–2006ರ ರಾಜೀನಾಮೆ ಪತ್ರವನ್ನು ಸಲ್ಲಿಸಿ ಅದನ್ನು ದಿನಾಂಕ: 30–12–2006 ರಿಂದ ಒಂದು ತಿಂಗಳ ನೋಟೀಸ್ ಎಂದು ಪರಿಗಣಿಸುವಂತೆ ಕೋರಿದ್ದರು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

ಪಿ.ಆರ್. 2468

## ವಸತಿ ಸಚಿವಾಲಯ

**ವಿಷಯ :** "ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಅಡಿಯಲ್ಲಿ ಮನೆಗಳ ನಿರ್ಮಾಣವನ್ನು ಕೈಗೊಳ್ಳಲು ಗುತ್ತಿಗೆದಾರರನ್ನು ಪೂರ್ವಾರ್ಹತೆ ಆಧಾರದ ಮೇಲೆ ಆಯ್ಕೆ ಮಾಡಿ ಪಟ್ಟಿ ಮಾಡಲು ಅಲ್ಪಾವಧಿ ಟೆಂಡರ್ ಕರೆಯುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ವಇ 22 ಹೆಚ್‌ಎಹೆಚ್ 2010, ದಿನಾಂಕ: 26–3–2010.

2. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಪತ್ರ ಸಂಖ್ಯೆ ಎಂಡಿ/ ಆರ್‌ಜಿಆರ್‌ಹೆಚ್‌ಸಿಎಲ್/ 01/ಟಿಇಸಿ/01/2010, ದಿನಾಂಕ: 26–08–2010.

**ಪ್ರಸ್ತಾವನೆ:**

"ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" **(Affordable Housing Scheme)** ಅಡಿಯಲ್ಲಿ 50,000 ರೂ.ಗಳಿಂದ 1.00 ಲಕ್ಷ ರೂ.ಗಳವರೆಗಿನ ವಾರ್ಷಿಕ ಆದಾಯದ ನಗರ/ಪಟ್ಟಣ ಪ್ರದೇಶಗಳಲ್ಲಿ ನಿವೇಶನರಹಿತ/ ವಸತಿರಹಿತ ಅರ್ಹ ಫಲಾನುಭವಿಗಳಿಗೆ ಸರ್ಕಾರದ ಸ್ವಾಧೀನದಲ್ಲಿರುವ ಜಮೀನಿನಲ್ಲಿ ನೆಲ ಮಹಡಿ + 2 ಮಹಡಿ ಸಮುಚ್ಛಯಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಯೋಜಿಸಲಾಗಿದೆ. ಮನೆ ನಿರ್ಮಾಣ ಹಾಗೂ ಮೂಲಭೂತ ಸೌಕರ್ಯ ಒದಗಿಸುವ ಕಾಮಗಾರಿಗಳನ್ನು ಹೊರ ಗುತ್ತಿಗೆದಾರರಿಗೂ ನೀಡಿದಲ್ಲಿ ಗುರಿಯನ್ನು ಅವಧಿಯಲ್ಲಿ ಸಂಪೂರ್ಣಗೊಳಿಸಲು ಸಾಧ್ಯವಾಗುವುದರಿಂದ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಗುತ್ತಿಗೆದಾರರನ್ನು ಪೂರ್ವಾರ್ಹತೆ ಆಧಾರದಲ್ಲಿ ಆಯ್ಕೆ ಮಾಡಿ ಪಟ್ಟು ಮಾಡಲು ಅಲ್ಪಾವಧಿ ಟೆಂಡರ್‌ಗೆ ಕರೆಯಲು ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ವವಿ 40 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2010**

"ನನ್ನ ಮನೆ–ಧಾರಣೀಯ ಗೃಹ ನಿರ್ಮಾಣ ಯೋಜನೆ" **(Affordable Housing Scheme)** ಅಡಿಯಲ್ಲಿ ನಗರ/ಪಟ್ಟಣ ಪ್ರದೇಶಗಳಲ್ಲಿ ಕಡಿಮೆ ಆದಾಯ ವರ್ಗದವರಿಗಾಗಿ ವಿವಿಧ ವಿಸ್ತೀರ್ಣಗಳ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾಮಗಾರಿಗಳನ್ನು ತ್ವರಿತವಾಗಿ ಸಂಪೂರ್ಣಗೊಳಿಸುವುದಕ್ಕಾಗಿ ಈ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರ ಹಾಗೂ ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ ಮಾತ್ರ ಅಲ್ಲದೇ ಹೊರ ಗುತ್ತಿಗೆದಾರರಿಂದಲೂ ಕಾಮಗಾರಿಯನ್ನು ಕೈಗೊಳ್ಳಲು ಅನುವಾಗುವುದಕ್ಕಾಗಿ ಗುತ್ತಿಗೆದಾರರನ್ನು ಪೂರ್ವಾರ್ಹತೆ ಆಧಾರದ ಮೇಲೆ ಆಯ್ಕೆ ಮಾಡಿ ಪಟ್ಟಿ ಮಾಡಲು ಅಲ್ಪಾವದಿ ಟೆಂಡರ್ ಕರೆಯುವ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪ್ರಸ್ತಾವನೆಯನ್ನು ಪರಿಶೀಲಿಸಿ ಅನುಮೋದನೆ ನೀಡಲು ವಸತಿ ಇಲಾಖೆಯ ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿಯವರಿಗೆ ಪ್ರಾಧಿಕಾರ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್.ವಲ್ಲೂರ**
ಪೀಠಾಧಿಕಾರಿ–2,
ವಸತಿ ಇಲಾಖೆ

ಪಿ.ಆರ್. 2469

## ವಸತಿ ಸಚಿವಾಲಯ

### ತಿದ್ದುಪಡಿ

ಸಂ.ವಇ/42/ಹೆಚ್‌ಎಹೆಚ್/2010, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್ 2010.

**ವಿಷಯ :** ಹುಬ್ಬಳ್ಳಿಯ ಜೈ ಹನುಮಾನ್ ನಗರದ ಗುಡಿಸಲುವಾಸಿಗಳಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ಮನೆಗಳನ್ನು ನಿರ್ಮಿಸುವ ಬಗ್ಗೆ.

**ಉಲ್ಲೇಖ :** ಜಿಲ್ಲಾಧಿಕಾರಿಗಳು, ಧಾರವಾಡ ಇವರ ಪತ್ರ ಸಂಖ್ಯೆ: ಯುಡಿಸಿ/ಆಶ್ರಯ/ವಇ/2009-10/529, ದಿನಾಂಕ: 01-08/09-2010.

ಹುಬ್ಬಳ್ಳಿಯ ಜೈ ಹನುಮಾನ್ ನಗರದ ಗುಡಿಸಲುವಾಸಿಗಳಿಗೆ ವಾಜಪೇಯಿ ನಗರ ವಸತಿ ಯೋಜನೆಯಡಿ ಮನೆಗಳ ನಿರ್ಮಾಣದ ಸರ್ಕಾರದ ಆದೇಶ ಸಂಖ್ಯೆ: ವಇ 39 ಹೆಚ್‌ಎಹೆಚ್ 2010, ದಿನಾಂಕ: 24-8-2010ರ ಆದೇಶದ ಭಾಗದಲ್ಲಿನ "ಒಟ್ಟು 96 ಮನೆಗಳನ್ನು ನೆಲ ಮಹಡಿ + 1 ಮಹಡಿಗಳ ಸಂಕೀರ್ಣಗಳಲ್ಲಿ" ಎಂಬುದಕ್ಕೆ ಬದಲಾಗಿ "ಒಟ್ಟು 96 ಮನೆಗಳನ್ನು ನೆಲ ಮಹಡಿ + 2 ಮಹಡಿಗಳ ಸಂಕೀರ್ಣಗಳಲ್ಲಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್.ವಲ್ಲೂರ**
ಪೀಠಾಧಿಕಾರಿ-2, ವಸತಿ ಇಲಾಖೆ

ಪಿ.ಆರ್. 2470

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಆರ್.ಬಿ.ದಾಸರ, ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಕುರಿ ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುದಾಪುರ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಮಮಇ 236 ಎಸ್‌ಜೆಡಿ 2004, ದಿನಾಂಕ: 25-04-2005.
(2) ಸರ್ಕಾರಿ ಆದೇಶ ಸಂಖ್ಯೆ: ಮಮಇ 236 ಎಸ್‌ಜೆಡಿ 2004, ದಿನಾಂಕ: 17-09-2007.
(3) ಆದೇಶ ಸಂಖ್ಯೆ: ಆಪಸಂ/ಜಾಗೃತ/ವಿವ-21/04/05. ದಿನಾಂಕ: 15-4-2010.
(4) ಶ್ರೀ. ಆರ್.ಬಿ.ದಾಸರ, ಅಧೀಕ್ಷಕರು ಇವರು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿ ದಿನಾಂಕ: 13-07-2010.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಶ್ರೀ ಆರ್.ಬಿ.ದಾಸರ, ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಕುರಿ ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುದಾಪುರ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರು ಉಪನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಗದಗ್ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಜೂನ್ 2000ನೇ ಇಸವಿಯಲ್ಲಿ ನಡೆದ ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಚುನಾವಣೆಗಳಲ್ಲಿ ಗದಗ್ ತಾಲ್ಲೂಕು ನಂ. 15 ಸೊರಟೂರು ತಾಲ್ಲೂಕು ಪಂಚಾಯತ್ ಕ್ಷೇತ್ರದ ಮತ ಎಣಿಕೆ ಮೇಲ್ವಿಚಾರಕರನ್ನಾಗಿ ರಾಜ್ಯ ಚುನಾವಣಾ ಆಯೋಗವು ನೇಮಕ ಮಾಡಿತ್ತು. ಶ್ರೀ ಆರ್.ಬಿ.ದಾಸರರವರು ಮತ ಎಣಿಕೆಯಲ್ಲಿ ನಿರ್ಲಕ್ಷ್ಯ ತೋರಿ ಕರ್ತವ್ಯ ಲೋಪ ಎಸಗಿದ್ದರಿಂದ ಸದರಿ ನೌಕರರು ಸೇರಿದಂತೆ ಶ್ರೀ ಕೆ.ಹೆಚ್ ಓಬಳಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಗದಗ್ ಇವರ ಮೇಲೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿತ್ತು.

2. ಇಲಾಖಾ ವಿಚಾರಣೆ ಮುಗಿದ ನಂತರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ಹೆಚ್.ಓಬಳಪ್ಪ, ಹಿಂದಿನ ಗದಗ್ ತಾಲ್ಲೂಕು ಪಂಚಾಯಿತಿ ಸಂಖ್ಯೆ: 15 ಸೊರಟೂರು ಕ್ಷೇತ್ರದ ಚುನಾವಣಾಧಿಕಾರಿಗಳು (ಹಾಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಳಗಾಂ) ಇವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಿ ಇನ್ನು ಮುಂದೆ ಯವುದೇ ಕರ್ತವ್ಯ ನಿರ್ವಹಣೆಯಲ್ಲೂ / ಚುವಾವಣಾ ವಿಚಾರಗಳಲ್ಲಿ ಮೇಲ್ವಿಚಾರಣೆ ಮಾಡುವಾಗ ಜಾಗರೂಕರಾಗಿರಲು 'ಆಡಳಿತಾತ್ಮಕ ಎಚ್ಚರಿಕೆ' ನೀಡಿತ್ತು ಹಾಗೂ ಶ್ರೀ. ಆರ್.ಬಿ.ದಾಸರ, ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಗದಗ್ ಇವರಿಗೆ ವಿಚಾರಣಾಧಿಕಾರಿಗಳು ನೀಡಿರುವ ಶಿಫಾರಸ್ಸನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ ನಿಯಮ 11 (ಎ) ರನ್ವಯ ಪರಿಶೀಲಿಸಿ ನಿಯಮಾನುಸಾರ ಸೂಕ್ತ ದಂಡನೆ ವಿಧಿಸಲು ಕ್ರಮ ಕೈಗೊಳ್ಳುವಂತೆ ಮಾತೃ ಇಲಾಖೆಯಾದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸೂಚಿಸಲಾಗಿತ್ತು.

3. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೂಚನೆಯಂತೆ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ. ಆರ್.ಬಿ.ದಾಸರ, ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆರವರು ಧಾರವಾಡ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಮತೆಣಿಕೆಯಲ್ಲಿನ ಕರ್ತವ್ಯಲೋಪದ ಆರೋಪ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iv-a) ರನ್ವಯ ನೌಕರರು ಹೊಂದಿರುವ ಕಾಲಿಕ ವೇತನ ಶ್ರೇಣಿಯಲ್ಲಿ ಕೆಳಗಿನ ಒಂದು ಹಂತಕ್ಕೆ ಒಂದು ವರ್ಷದ ಕಾಲ ಇಳಿಸುವ ದಂಡನೆಯನ್ನು ವಿಧಿಸಿರುತ್ತಾರೆ,

4. ದಂಡನಾದೇಶದಿಂದ ಬಾಧಿತರಾದ ಶ್ರೀ ಆರ್.ಬಿ.ದಾಸರ, ಅಧೀಕ್ಷಕರು, ಇವರು ದಂಡನಾದೇಶ ಪ್ರಶ್ನಿಸಿ ಮೇಲೆ ಓದಲಾದ ಕ್ರಮಸಂಖ್ಯೆ (4)ರನ್ವಯ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿದ್ದು ಅದರಲ್ಲಿ ಶಿಸ್ತು ಪ್ರಾಧಿಕಾರವು ಅವರಿಗೆ ವಿಚಾರಣಾ ಪ್ರಾಧಿಕಾರವು ದಿನಾಂಕ: 06-08-2005 ರಂದು ನೀಡಿದ ವಿಚಾರಣಾ ವರದಿಯನ್ನು ನೀಡದ ಬಗ್ಗೆ ಪ್ರಸ್ತಾಪಿಸಿ ದಂಡನಾದೇಶವನ್ನು ಕೈಬಿಡಲು ಕೋರಿರುತ್ತಾರೆ.

5. ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೂಚನೆಯಂತೆ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಶ್ರೀ. ಆರ್.ಬಿ.ದಾಸರ, ಅಧೀಕ್ಷಕರುರವರ ಮೇಲಿನ ಮತಎಣಿಕೆಯಲ್ಲಿನ ಕರ್ತವ್ಯಲೋಪದ ಆರೋಪ ಸಾಬೀತಾದ ಕರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iv-a) ರನ್ವಯ ನೌಕರರು ಹೊಂದಿರುವ ಕಾಲಿಕ ವೇತನಶ್ರೇಣಿಯಲ್ಲಿ ಕೆಳಗಿನ ಒಂದು ಹಂತಕ್ಕೆ ಒಂದು ವರ್ಷದ ಕಾಲ ಇಳಿಸುವ ದಂಡನೆಯನ್ನು ವಿಧಿಸಿರುತ್ತಾರೆ. ಸದರಿ ದಂಡನೆಯನ್ನು ಕೈಬಿಡುವಂತೆ ನೌಕರರು ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರಕ್ಕೆ ನಿಗದಿತ ಅವಧಿಯೊಳಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಸಿಬ್ಬಂದಿ ಮತ್ತು ಅಡಳಿತ ಸುಧಾರಣಾ ಇಲಾಖೆಯ ಸುತ್ತೋಲೆ ಸಂಖ್ಯೆ: ಸಿಆಸುಇ 12 ಸೇಇವಿ 94, ದಿನಾಂಕ: 07–12–1994ರನ್ವಯ ವಿಚಾರಣಾ ಪ್ರಾಧಿಕಾರವು ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ನಡೆಸಿ ಸಕ್ಷಮ ಶಿಸ್ತು ಪ್ರಾಧಿಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಸಕ್ಷಮ ಶಿಸ್ತುಪ್ರಾಧಿಕಾರವು ವಿಚಾರಣಾ ಪ್ರಾಧಿಕಾರಿಯ ವರದಿಯನ್ನು ಒಪ್ಪಿಕೊಂಡ ಪಕ್ಷದಲ್ಲಿ ಅದನ್ನು ಆರೋಪಿತ ನೌಕರರಿಗೆ ಕಳುಹಿಸಿ, ಅವರಿಗೆ ಸೂಕ್ತ ಕಾಲಾವಕಾಶವನ್ನು ಕೊಟ್ಟು ಅವರ ಹೇಳಿಕೆಯನ್ನು ಪಡೆದು, ತದನಂತರ ಸೂಕ್ತ ದಂಡನೆಯನ್ನು ವಿಧಿಸಬೇಕಾಗುತ್ತದೆ. ಆದರೆ ಈ ಪ್ರಕರಣದಲ್ಲಿ ಇಲಾಖಾ ನಿರ್ದೇಶಕರ ದಿನಾಂಕ: 15–04–2010ರ ದಂಡನಾದೇಶದಲ್ಲಿ ನೌಕರರಿಗೆ ವಿಚಾರಣಾ ಪ್ರಾಧಿಕಾರದ ವರದಿಯನ್ನು ನೀಡಿದ ಬಗ್ಗೆ ಕಂಡುಬರುತ್ತಿಲ್ಲ. ಜೊತೆಗೆ ನೌಕರರು ಸಲ್ಲಿಸಿರುವ ಯಾವ ಯಾವ ಅಂಶಗಳನ್ನು ಲಿಖಿತ ಹೇಳಿಕೆಯಲ್ಲಿ ಸಲ್ಲಿಸಿದ್ದಾರೆ, ಈ ಬಗ್ಗೆ ಶಿಸ್ತು ಪ್ರಾಧಿಕಾರವು ಯಾವ ರೀತಿ ಚರ್ಚಿಸಿ ತೀರ್ಮಾನಿಸಿದೆ ಎಂಬ ಬಗ್ಗೆ ಆದೇಶದಲ್ಲಿ ತಿಳಿಸಿರುವುದಿಲ್ಲ. Speaking Order ಹೊರಡಿಸಿರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಗಂಭೀರವಾಗಿ ಪರಿಗಣಿಸಿದ ಸರ್ಕಾರ ಸದರಿ ಮೇಲ್ಮನವಿ ಪ್ರಕರಣದಲ್ಲಿ ಸರ್ಕಾರವು ಮಧ್ಯಪ್ರವೇಶಿಸಿ ಶ್ರೀ ಆರ್.ಬಿ.ದಾಸರ, ಅಧೀಕ್ಷಕರು ಇವರು ಮೇಲ್ಮನವಿಯನ್ನು ಸ್ವೀಕರಿಸಲು ಹಾಗೂ ಆಪಾದಿತ ನೌಕರನಿಗೆ ವಿಚಾರಣಾ ವರದಿಯನ್ನು ನೀಡಿ ಅವನಿಂದ ಲಿಖಿತ ಹೇಳಿಕೆ ಪಡೆಯದೆ ದಂಡನೆ ವಿಧಿಸಿರುವ ಕಾರಣದ ಮೇಲೆ ದಿನಾಂಕ: 15–04–2010ರ ಆದೇಶ ತಳ್ಳಿಹಾಕಲು ನಿರ್ಧರಿಸಿದೆ ಹಾಗೂ ಯಾವ ಹಂತದಿಂದ ಇಲಾಖಾ ವಿಚಾರಣೆ ತಪ್ಪಾಗಿದೆಯೋ ಆ ಹಂತದಿಂದ ಅಂದರೆ ವಿಚಾರಣಾ ಪ್ರಾಧಿಕಾರಿಯ ವರದಿಯನ್ನು ಆರೋಪಿತ ನೌಕರನಿಗೆ ಕಳುಹಿಸಿ ಅವರಿಗೆ ಸೂಕ್ತ ಕಾಲಾವಕಾಶ ಕೊಟ್ಟು ಅವರಿಂದ ಲಿಖಿತ ಹೇಳಿಕೆ ಪಡೆದು, ಅದನ್ನು ಪರಿಶೀಲಿಸಿ ತದನಂತರ ನಿಯಮಾನುಸಾರ ಸೂಕ್ತ ದಂಡನೆಯನ್ನು ವಿಧಿಸುವಂತೆ ನಿರ್ದೇಶಕರು ಮತ್ತು ಶಿಸ್ತು ಪ್ರಾದಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರಿಗೆ ನಿರ್ದೇಶನ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ ಸಂಖ್ಯೆ: ಪಸಂಮೀ 128 ಪಅವಿ 2010, ಬೆಂಗಳೂರು, ದಿನಾಂಕ: 14 ನೇ ಸೆಪ್ಟೆಂಬರ್ 2010.**

6. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕರಣವನ್ನು ಸಮಗ್ರವಾಗಿ ಪುನರ್ ಪರಿಶೀಲಿಸಿದ ಸರ್ಕಾರ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಉಮ 26ರಲ್ಲಿ ಪರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಆದೇಶ ಸಂಖ್ಯೆ: ಆಪಸಂ/ಜಾಗೃತ/ವಿವ–21/04–05, ದಿನಾಂಕ: 15–04–2010ರಲ್ಲಿ ಶ್ರೀ ಆರ್.ಬಿ.ದಾಸರ, ಅಧೀಕ್ಷಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iv-a) ರನ್ವಯ ನೌಕರರು ಹೊಂದಿರುವ ಕಾಲಿಕ ವೇತನಶ್ರೇಣಿಯಲ್ಲಿ ಕೆಳಗಿನ ಒಂದು ಹಂತಕ್ಕೆ ಒಂದು ವರ್ಷದ ಕಾಲ ಇಳಿಸುವ ದಂಡನೆಯನ್ನು ವಿಧಿಸಿರುವುದನ್ನು ರದ್ದುಪಡಿಸಿದೆ. ಅಂತೆಯೇ, ವಿಚಾರಣಾ ಪ್ರಾಧಿಕಾರಿಯು ವಿಚಾರಣಾ ವರದಿಯನ್ನು ಆರೋಪಿತ ನೌಕರರಾದ ಶ್ರೀ ಆರ್.ಬಿ.ದಾಸರ, ಅಧೀಕ್ಷಕರು, ಇವರಿಗೆ ಕಳುಹಿಸಿ, ಅವರಿಗೆ ಸೂಕ್ತ ಕಾಲಾವಕಾಶ ಕೊಟ್ಟು, ನೌಕರರಿಂದ ಲಿಖಿತ ಹೇಳಿಕೆ ಪಡೆದು, ಅದನ್ನು ಪರಿಶೀಲಸಿ, ತದನಂತರ ನಿಯಮಾನುಸಾರ ಸೂಕ್ತ ದಂಡನೆಯನ್ನು ವಿಧಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ.ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

ಪಿ.ಆರ್. 2471

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ದಿನಾಂಕ: 13–08–2010.
2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/5299/2010, ದಿನಾಂಕ: 20–8–2010.

**ಪ್ರಸ್ತಾವನೆ:**

ಆಸರೆ ಯೋಜನೆಯಡಿ ಬಿಜಾಪುರ ಜಿಲ್ಲೆಯಲ್ಲಿ ಮೆ: ಗೋವಿಂದ್‌ಜಿ ಹ್ಯುಮ್ಯಾನಿಟೇರಿಯನ್ ಫೌಂಡೇಶನ್ನಿಗೆ ವಹಿಸಿಕೊಡಲಾದ ಒಟ್ಟು 1673 ಮನೆಗಳ ನಿರ್ಮಾಣ ಕಾರ್ಯವನ್ನು ಆ ಸಂಸ್ಥೆಯು ಕೈಗೊಳ್ಳದಿರುವುದರಿಂದ ಮೇಲೆ ಓದಲಾದ ಕ್ರಸಂಖ್ಯೆ (1)ರಲ್ಲಿನ ಆದೇಶದಲ್ಲಿ ಆ ಮನೆಗಳ ನಿರ್ಮಾಣ ಕಾರ್ಯವನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತರವರಿಗೆ ಕೂಡಲೇ ಪ್ರಾರಂಭಿಸಲು ಆದೇಶಿಸಲಾಗಿದೆ. ಮೇಲೆ ಓದಲಾದ ಕ್ರ. ಸಂ. (2)ರ ಮುಖ್ಯ ಮಂತ್ರಿಗಳ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಬಿಜಾಪುರ ಜಿಲ್ಲೆಗೆ ವಹಿಸಿದ ಗ್ರಾಮಗಳಲ್ಲಿನ ಮನೆಗಳ ನಿರ್ಮಾಣ ಕಾರ್ಯವು ಬಹಳ ಹೆಚ್ಚುವರಿಯಾಗಿರುವುದರಿಂದ ಈ ಜಿಲ್ಲೆಯಲ್ಲಿನ ಮನೆಗಳ ನಿರ್ಮಾಣವನ್ನು ಬೇರೆ ಏಜೆನ್ಸಿಗಳಿಗೆ ನೀಡುವಂತೆ ಕೋರಿದ್ದು, ಜಿಲ್ಲಾಧಿಕಾರಿಗಳು ಬಿಜಾಪುರ ಇವರೊಡನೆ ಚರ್ಚಿಸಿ, ಈ ಗ್ರಾಮಗಳನ್ನು ಲೋಕೋಪಯೋಗಿ ಇಲಾಖೆಗೆ ಮರುಹಂಚಿಕೆ ಮಾಡಿದ್ದು, ವಸತಿ ಇಲಾಖೆಯಿಂದ ಹೊರಡಿಸಲಾದ ಕ್ರ.ಸಂ. (1) ಆದೇಶವನ್ನು ವಿಲೇ ಇಡುವಂತೆ ಸೂಚಿಸಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2010**

ಆಸರೆ ಯೋಜನೆಯಡಿ ಬಿಜಾಪುರ ಜಿಲ್ಲೆಯ, ಬಿಜಾಪುರ ತಾಲ್ಲೂಕು ಹಾಗೂ ಬಸವನಬಾಗೇವಾಡಿ ಗ್ರಾಮಗಳ ಒಟ್ಟು 1673 ಮನೆಗಳ ನಿರ್ಮಾಣ ಕಾರ್ಯವನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತಕ್ಕೆ ವಹಿಸಿ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ದಿನಾಂಕ: 13–8–2010ರ ಆದೇಶವನ್ನು ತಕ್ಷಣದಿಂದ ಹಾಗೂ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್.ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 2472

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಚಂದ್ರಶೇಖರ ಜಿ. ಹಿರೇಮಠ್, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂ:ಲಾ 51 ಪಿಪಿಇ 80, ದಿನಾಂಕ: 02.04.1981,
2) ಸರ್ಕಾರದ ಅಧಿಸೂಚನೆ II-ಸಂ:ಲಾ 206 ಪಿಪಿಇ 87, ದಿನಾಂಕ: 23.06.1989,
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 111 ಪಿಪಿಇ 95, ದಿನಾಂಕ: 31.05.1995,
4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ:14.08.2008,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ.1/98(04)/ 2008–09, ದಿನಾಂಕ: 13.04.2010.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 02.04.1981ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:18ರನ್ವಯ ಶ್ರೀ ಚಂದ್ರಶೇಖರ್ ಜಿ. ಹಿರೇಮಠ್, ಅಭಿಯೋಗ ಉಪ ನಿರ್ದೇಶಕರರು, ಬೆಂಗಳೂರು ನಗರ ವಿಭಾಗ, ಬೆಂಗಳೂರುರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 05.04.1981 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 23.06.1989ರ ಸರ್ಕಾರದ ಅಧಿಸೂಚನೆ–IIರ ಕ್ರ.ಸಂ:13ರನ್ವಯ ಶ್ರೀ ಚಂದ್ರಶೇಖರ್ ಜಿ.ಹಿರೇಮಠ್‌ರವರು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿರುತ್ತಾರೆ,

ಮೇಲೆ (3)ರಲ್ಲಿ ಓದಲಾದ ದಿನಂಕ: 31.05.1995ರ ಸರ್ಕಾರದ ಅಧಿಸೂಚನೆಯ ಭಾಗ–Iರ ಕ್ರ.ಸಂ:13 ರನ್ವಯ ಶ್ರೀ ಚಂದ್ರಶೇಖರ್ ಜಿ. ಹಿರೇಮಠ್‌ರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 22.06.1995 ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 13.04.2010ರ ಪತ್ರದಲ್ಲಿ, ಮೇಲೆ (1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಚಂದ್ರಶೇಖರ್ ಜಿ.ಹಿರೇಮಠ್‌ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ಪ್ರಸ್ತುತ ರೂ. 18150–26925ರ ವೇತನ ಶ್ರೇಣಿಯ ಗ್ರೂಪ್–ಎ ಅಧಿಕಾರಿಯ ಹುದ್ದೆಯಾದ ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ: 22.06.1995ರ ಪೂರ್ವಾಹ್ನದಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸರ್ಕಾರಿ ಸೇವೆ ಸಲ್ಲಿಸಿರುತ್ತಾರೆ. ಸದರಿಯವರು ಅವರ ಮುಂದಿನ ಹುದ್ದೆಯಾದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆಯಲು ಇಲಾಖಾ ವೃಂದ ಮತ್ತು ನೇಮಕಾತಿ ನಿಮಯಗಳನ್ವಯ ಅರ್ಹರಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ ಹಾಗೂ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಆದ್ದರಿಂದ, ಮೇಲೆ (4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ಆಯ್ಕೆ ದರ್ಜೆ ವೇತನ ಶ್ರೇಣಿಗೆ ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ: 01.08.2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಸದರಿ ಅಧಿಕಾರಿಯ ವಿರುದ್ಧದ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 132 ಪಿಪಿಇ 2010, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಚಂದ್ರಶೇಖರ್ ಜಿ.ಹಿರೇಮಠ್, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರುನಗರ ವಿಭಾಗ, ಬೆಂಗಳೂರು ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ (ವೇತನ ಶ್ರೇಣಿ ರೂ. 18150–26925) ದಿನಾಂಕ: 22.06.95 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ರೂ. 19050–27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2473

## ಒಳಾಡಳಿತ ಸಚಿವಾಲಯ

**ವಿಷಯ** : ಉಡುಪಿಯ ಅಧಿಕ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸರ್ಕಾರಿ ಅಭಿಯೋಜಕರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಕುರಿತು.

**ಓದಲಾಗಿದೆ** : 1. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಜಿಒಬಿ (1) 412/2000, ದಿನಾಂಕ: 01.02.2010.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ ಸಿಶಾ.1/317/2009–10, ದಿನಾಂಕ: 25.05.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 01.02.2010ರ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಅಧಿಕ ಸಿವಿಲ್ ಜಡ್ಜ್ (ಹಿರಿಯ ವಿಭಾಗ), ಉಡುಪಿರವರನ್ನು ಅಧಿಕ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳು, ಉಡುಪಿ ಎಂದು ನೇಮಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ: 25.05.2010ರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯದ ಉಡುಪಿಯ ಅಧಿಕ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯದಲ್ಲಿ ಸರ್ಕಾರದ ಪರವಾಗಿ ರಾಜ್ಯವನ್ನು ಪ್ರತಿನಿಧಿಸಿ, ಪ್ರಕರಣಗಳನ್ನು ನಡೆಸಲು, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ, ದ್ವಿತೀಯ ದರ್ಜೆಯ ಸಹಾಯಕರ ಹಾಗೂ ದಲಾಯತ್ ತಲಾ ಒಂದು ಹುದ್ದೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ. ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 168 ಪಿಪಿಇ 2010, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಗಳ ಹಿನ್ನೆಲೆಯಲ್ಲಿ, ಉಡುಪಿ ಅಧಿಕ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಈ ಕೆಳಕಂಡ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 |
| 2 | ದ್ವಿತೀಯ ದರ್ಜೆ ಸಹಾಯಕ | 01 |
| 3 | ದಲಾಯತ್ | 01 |
| | **ಒಟ್ಟು** | **03** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014–ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 177 ವೆಚ್ಚ–11/2010. ದಿನಾಂಕ: 02.09.2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2474

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಶ್ರೀ ಎಂ.ಖುಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಕೋಲಾರ, ಇವರ ಮೇಲೆ ಲೋಕಾಯುಕ್ತ ಟ್ರಾಪ್ ಪ್ರಕರಣ ದಾಖಲಿಸಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ** : ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರ, ಬೆಂಗಳೂರು, ರವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ (ಜಿ)/ಬಿಡಿ–38/ ಸಿಆರ್–8/2010/ಕೋಲಾರ, ದಿ: 14.07.2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರು ದಿನಾಂಕ: 29.06.2010 ರಂದು ಶ್ರೀ ಎಸ್.ಗಂಗಪ್ಪ ಬಿನ್ ಸುಬ್ಬನ್ನ ಲೇಟ್ ಜಿರಾಯ್ತಿ ಕಸಬು ಕಂಗಾಡ್ಲಹಳ್ಳಿ ಗ್ರಾಮ, ಕ್ಯಾಸಂಬಳ್ಳಿ ಹೋಬಳಿ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ, ರವರು ಕೋಲಾರ ಲೋಕಾಯುಕ್ತ ಕಛೇರಿಗೆ ಹಾಜರಾಗಿ ನೀಡಿದ್ದ ದೂರಿನ ಸಾರಾಂಶವೇನೆಂದರೆ ಫಿರ್ಯಾದಿದಾರರು 2009–10ನೇ ಸಾಲಿನ ವಿಶೇಷ ಘಟಕ ಯೋಜನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ವಸತಿ ನಿರ್ಮಾಣದ ಸಲುವಾಗಿ ಜಿಲ್ಲಾ ಪಂಚಾಯತ್, ಕೋಲಾರ ವ್ಯಾಪ್ತಿಗೊಳಪಟ್ಟ ತಾಲ್ಲೂಕ್ ಕೈಗಾರಿಕಾ ವಿಸ್ತರಣಾಧಿಕಾರಿಗಳು, ಬಂಗಾರಪೇಟೆ, ರವರಿಗೆ ಎಲ್ಲಾ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಿದ್ದು ಸದರಿಯವರು ಮೂಲ ಅರ್ಜಿಯನ್ನು ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ರವರಲ್ಲಿ ಸಲ್ಲಿಸಿದ ನಂತರ ಮನೆ ನಿರ್ಮಾಣ ಮಾಡಲು ಅನುಮತಿ ನೀಡಿರುತ್ತಾರೆ.

ಅದರಂತೆ, ಸದರಿಯವರು ಮನೆ ನಿರ್ಮಾಣದ ಕಾರ್ಯವನ್ನು ಆರಂಭಿಸಿ, ಪಾಯದಿಂದ ಲಿಂಟಲ್‌ವರೆಗೆ ಮನೆಯನ್ನು ನಿರ್ಮಾಣ ಮಾಡಿದ್ದು. ಸದರಿ ಮನೆ ನಿರ್ಮಾಣಕ್ಕೆ ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ವತಿಯಿಂದ 3 ಕಂತುಗಳಂತೆ ಪ್ರತಿ ಕಂತಿಗೆ ರೂ. 18,000/–ಗಳಂತೆ ನೀಡಬೇಕಿದ್ದು ಈಗ 2 ಕಂತುಗಳ ಒಟ್ಟು ಮೊತ್ತ ರೂ. 36,000/–ಗಳ ಚೆಕ್‌ನ್ನು ಯೋಜನೆಯಡಿ ನೀಡಬೇಕಾಗಿರುತ್ತದೆ. ಫಿರ್ಯಾದಿದಾರರು ಮನೆ ನಿರ್ಮಾಣ ಮಾಡಿದ ಬಗ್ಗೆ ಬಂಗಾರಪೇಟೆ ತಾಲ್ಲೂಕು ಕೈಗಾರಿಕಾ ವಿಸ್ತರಣಾಧಿಕಾರಿಗಳ ಸ್ಥಳ ಪರಿಶೀಲನೆ ಮಾಡಿ ಮೊದಲನೆ ಹಗೂ 2ನೇ ಕಂತಿನ ಹಣವನ್ನು ಬಿಡುಗಡೆ ಮಾಡುವಂತೆ ಕೋರಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೋಲಾರ, ರವರೆಗೆ ಪತ್ರ ಬರೆದಿರುತ್ತಾರೆ. ಅದರಂತೆ. ಫಿರ್ಯಾದಿದಾರರು ಮನೆ ನಿರ್ಮಾಣದ 2 ಕಂತುಗಳ ಮೊತ್ತ ರೂ. 36,000/– ಗಳ ಚೆಕ್‌ನ್ನು ನೀಡುವಂತೆ ಜಿಲ್ಲಾ ಕೈಗಾರಿಕಾ ಕೇಂದ್ರ, ಉಪ ನಿರ್ದೇಶಕರಾದ ಶ್ರೀ ಖೂಬ್ಯಾನಾಯ್ಕ, ರವರನ್ನು ಕೇಳಲಾಗಿ ಅವರು ಮನೆ ನಿರ್ಮಾಣದ ಚೆಕ್‌ನ್ನು ನೀಡಲು ರೂ. 6,000/–ಗಳ ಲಂಚದ ಹಣಕ್ಕೆ ಒತ್ತಾಯಿಸಿರುತ್ತಾರೆ; ಫಿರ್ಯಾದಿದಾರರು ಬಡವನಿದ್ದೇನೆ, ಅಷ್ಟೊಂದು ಹಣವನ್ನು ಕೊಡುವುದಕ್ಕಾಗುವುದಿಲ್ಲ, ಮೂರುವರೆ ಸಾವಿರ ರೂಪಾಯಿಗಳನ್ನು ಜೋಡಿಸಿ ಕೊಡುತ್ತೇನೆ ಎಂದು ತಿಳಿಸಿರುತ್ತಾರೆ; ನಂತರ ಶ್ರೀ ಎಂ.ಖೂಬ್ಯಾನಾಯ್ಕ, ರವರು ರೂ. 3,500/–ಗಳನ್ನು ತಂದುಕೊಟ್ಟರೆ ಮಾತ್ರ ಮನೆ ನಿರ್ಮಾಣದ ಚೆಕ್‌ನ್ನು ನೀಡುತ್ತೇನೆ, ಇಲ್ಲದಿದ್ದರೆ ಆಗುವುದಿಲ್ಲ ಅಂತ ರೂ. 3500/–ಗಳ ಲಂಚದ ಹಣಕ್ಕೆ ಒತ್ತಾಯ ಮಾಡಿರುತ್ತಾರೆ. ಈ ಹಂತದಲ್ಲಿ ಫಿರ್ಯಾದಿಯವರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ್ದರಿಂದ ಸೂಕ್ತ ಕಾನೂನು ರೀತ್ಯಾ ಕ್ರಮಕ್ಕೆ ಲೋಕಾಯುಕ್ತರವನ್ನು ಕೋರಿರುತ್ತಾರೆ.

ಸದರಿ ದೂರನ್ನು ಆದರಿಸಿ ಕೋಲಾರ ಲೋಕಾಯುಕ್ತ ಪೊಲೀಸ್ ರವರು, ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ರವರ ವಿರುದ್ದ ಲಂಚ ನಿರೋಧ ಕಾಯ್ದೆ 1988ರ ಕಲಂ 13 (1) (ಡಿ) ಜೊತೆಗೆ 13 (2) ರ ಪ್ರಕಾರ ಕೋಲಾರ ಲೋಕಾಯುಕ್ತ ಠಾಣೆ ಮೊಕದ್ದಮೆ ನಂ. 08/2010 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿ: 29.06.2010 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಆರೋಪಿತ ಸರ್ಕಾರಿ ಅಧಿಕಾರಿಯಾದ ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಕೋಲಾರ, ಇವರು ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಆವರಣದಲ್ಲಿದ್ದ ಉಪ ನಿರ್ದೇಶಕರ ಕೊಠಡಿಯಲ್ಲಿ ನೆರಳು ಸಾಕ್ಷಿಯ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ.3500/–ಗಳನ್ನು ಒತ್ತಾಯಿಸಿ ಸ್ವೀಕರಿಸುತ್ತಿರುವಾಗ ಕೋಲಾರ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಆರೋಪಿತ ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ರವರ ಬಲ ಕೈ ಬೆರಳುಗಳನ್ನು ತೊಳೆಸಿದ ದ್ರಾವಣದ ಬಣ್ಣ ಬದಲಾಗಿ ಆರೋಪಿತರು ಲಂಚದ ಹಣ ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಲಂಚದ ಹಣ ರೂ. 3500/ಗಳನ್ನು ನೆರಳು ಸಾಕ್ಷಿಯ ಸಮಕ್ಷಮ ಆರೋಪಿತರು ತಮ್ಮ ಟೇಬಲ್‌ನ ಬಲಗಡೆ ಇರುವ ಡ್ರಾಯರ್ ಮೇಲ್ಭಾಗದಲ್ಲಿ ಇಟ್ಟಿದ್ದನ್ನು ವಶಪಡಿಸಿಕೊಳ್ಳಲಾಗಿದೆ. ಆರೋಪಿತರು ಲಂಚದ ಹಣಕ್ಕೆ ಒತ್ತಾಯಿಸಿ ಸ್ವೀಕರಿಸಿದ ಬಗ್ಗೆ ಫಿರ್ಯಾದುದಾರರು ಮತ್ತು ನೆರಳು ಸಾಕ್ಷಿದಾರರುಗಳು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆ ಹಾಗೂ ಆರೋಪಿತರನ್ನು ದಸ್ತಗಿರಿ ಮಾಡಲಾಯಿತೆಂದು ವರದಿಸಲಾಗಿದೆ.

ಈ ಪ್ರಕರಣದಲ್ಲಿ ಮೇಲೆ ತಿಳಿಸಿರುವಂತೆ ಆರೋಪಿತ ಸರ್ಕಾರಿ ಅಧಿಕಾರಿ ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ರವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ರವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟುಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ, ಮಾಡುವ; ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಉಲ್ಲೇಖಿತ ಪತ್ರದಲ್ಲಿ ಕೋರಲಾಗಿರುತ್ತದೆ. ಅಲ್ಲದೆ. ಕೂಡಲೇ ಸದರಿಯವರ ಲೀನ್ (ಸ್ಥಾನ) ವನ್ನು ಬೇರೆ ಕಡೆಗೆ ವರ್ಗಾಯಿಸಲು ಸಹ ಕೋರಲಾಗಿರುತ್ತದೆ. ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆಗಳನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 172 ಕೈಸೇವಿ 2010, ಬೆಂಗಳೂರು, ದಿ: 23.09.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಂ.ಖೂಬ್ಯಾನಾಯ್ಕ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋಲಾರ, ಇವರು ಫಿರ್ಯಾದುದಾರರಿಂದ ಲಂಚದ ಹಣ ರೂ. 3500/–ಗಳನ್ನು (ರೂಪಾಯಿ ಮೂರು ಸಾವಿರದ ಐದುನೂರು ಮಾತ್ರ) ಸ್ವೀಕರಿಸಿರುವುದು ಮೇಲ್ನೋಟಕ್ಕೆ ದೃಢಪಟ್ಟಿದ್ದು, ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ನಿಯಮ 10(1) (3) ರನ್ವಯ ಹಾಗೂ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಡಿಇ 2000. ದಿ: 15.04.2002ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ, ಶ್ರೀಯುತರ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ನಿಯಮಾವಳಿ ರೀತ್ಯಾ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ಸರ್ಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ. ಹಾಗೂ ಶ್ರೀಯುತರ ಲೀನ್‌ನ್ನು ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್ ಹಾವೇರಿ ಇಲ್ಲಿಗೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್.ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,

ಪಿ.ಆರ್. 2475 (ಸೇವೆಗಳು)

## ವಸತಿ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಐಹೆಚ್‌ಎಸ್‌ಡಿಪಿ ಯೋಜನೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರಗಳ ಸಂಖ್ಯೆ:ಕಕೊನಿಮ /ಲೆ.ಪ.ಶಾ:ನರ್ಮ್/ಐಹೆಚ್‌ಎಸ್‌ಡಿಪಿ/ 2010.11. ದಿ: 11–08–2010.

2) ಆರ್ಥಿಕ ಇಲಾಖೆಯ ಜಮಾ ದೃಢೀಕರಣದ ಪತ್ರ ಸಂಖ್ಯೆ:

1) FD 13 BGL 2009, ದಿನಾಂಕ: 18–06–2010.

2) FD 13 BGL 2010, ದಿನಾಂಕ: 14–07–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) ರಾಜ್ಯಾದ್ಯಂತ ವಿವಿಧ 25 ನಗರ ಪಟ್ಟಣಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತದೆ. ಸದರಿ ಯೋಜನೆಗೆ ಕೇಂದ್ರ ಸರ್ಕಾರದಿಂದ 2ನೇ ಕಂತಿನ ಅನುದಾನದ ಶೇಕಡ 50% ರಷ್ಟು ಅನುದಾನವನ್ನು ಮೇಲೆ ಉಲ್ಲೇಖ (2)ರಲ್ಲಿ ತಿಳಿಸಲಾಗಿರುವ ಜಮಾ ದೃಢೀಕರಣ ಪತ್ರದಲ್ಲಿ ಕ್ರಮವಾಗಿ ರೂ. 397.94 ಲಕ್ಷ ಹಾಗೂ ರೂ. 1,604.17 ಲಕ್ಷ ಒಟ್ಟು 2,002.11 ಲಕ್ಷಗಳನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುತ್ತದೆ. ಸದರಿ ಮೊತ್ತವು 16 ವಿವಿಧ ನಗರ/ಪಟ್ಟಣಗಳಿಗೆ (ಬಸವಕಲ್ಯಾಣ, ಬಳ್ಳಾರಿ, ಹಿರಿಯೂರು, ಕೊಪ್ಪಳ, ಸವದತ್ತಿ, ಶಹಪುರ, ಬೆಳಗಾಂ, ಬೆಟಗೇರಿ, ಭಾಲ್ಕಿ, ಗಜೇಂದ್ರಗಡ, ಗುಲ್ಬರ್ಗಾ, ಹಾಸನ, ಹೊಳೆನರಸೀಪುರ, ಕಡೂರು, ನಾಗಮಂಗಲ, ನಂಜನಗೂಡು) ಸಂಬಂಧಿಸಿದಂತೆ (ಕೇಂದ್ರದ ಪಾಲಿನ ಶೇಕಡ 50% 2ನೇ ಬಾಕಿ ಕಂತು) ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಮೊತ್ತ ಸೇರಿದಂತೆ ರಾಜ್ಯ ಸರ್ಕಾರದ ವಂತಿಗೆಯನ್ನೂ ಸೇರಿಸಿ ಒಟ್ಟಾರೆ 3555.80 ಲಕ್ಷ ಬಿಡುಗಡೆ ಮಾಡಬೇಕೆಂದು ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 12 ಕೊಮಂಲೆ 2009, ಬೆಂಗಳೂರು, ದಿನಾಂಕ: 20–09–2010**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ (ಐಹೆಚ್‌ಎಸ್‌ಡಿಪಿ) ಯೋಜನೆಯಡಿಯಲ್ಲಿ 16 ನಗರ/ಪಟ್ಟಣಗಳಿಗೆ (ಕೇಂದ್ರದ ಪಾಲಿನ 50% 2ನೇ ಬಾಕಿ ಕಂತು) ಕ್ರಮವಾಗಿ ರೂ. 397.94 ಲಕ್ಷ + 1,604.17 ಲಕ್ಷ ಒಟ್ಟು 2,002.11 ಲಕ್ಷಗಳನ್ನು (ರೂಪಾಯಿ ಇಪ್ಪತ್ತು ಕೋಟಿ ಎರಡು ಲಕ್ಷದ ಹನ್ನೊಂದು ಸಾವಿರ ಮಾತ್ರ) ಬಿಡುಗಡೆ ಮಾಡಿದ್ದು, ಸದರಿ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2217–04–191–2–03 ಯೋಜನೆಯಡಿಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರದ ಆದೇಶಿಸಿದೆ.

ಕಾಲಕಾಲಕ್ಕೆ ಕೇಂದ್ರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚನೆ, ಕೇಂದ್ರ ಸಿಎಸ್‌ಸಿ ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ, ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರ ಜೊತೆಗೆ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕೆಂದು ಸೂಚಿಸಲಾಗಿದೆ.

1. ಈ ಮೊತ್ತವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
3. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ/ಕೇಂದ್ರ ಸರ್ಕಾರಕ್ಕೆ ನೀಡತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
5. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.
6. ನಿಗದಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
7. ಈ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು, ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 588 ವೆಚ್ಚ–9/2010, ದಿನಾಂಕ: 06–09–2010ರ ಸೂಚನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಹನುಮಂತಯ್ಯ**

ಪೀಠಾಧಿಕಾರಿ–1, ವಸತಿ ಇಲಾಖೆ.

ಪಿ.ಆರ್. 2476

## ಸಹಕಾರ ಸಚಿವಾಲಯ

**ವಿಷಯ :** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಪಿಎಫ್‌ಎನ್ 1994 ದಿನಾಂಕ: 17–9–1996.

(2) ಸರ್ಕಾರದ ಆದೇಶ ಸಂಖ್ಯೆ: ಸಇ 20 ಸಸಂನೋ 2008 ದಿನಾಂಕ: 25–9–2008.

(3) ಸರ್ಕಾರದ ಆದೇಶ ಸಂಖ್ಯೆ: ಸಇ 20 ಸಸಂನೋ 2008 ದಿನಾಂಕ: 15–6–2009.

(4) ಸರ್ಕಾರದ ಆದೇಶ ಸಂಖ್ಯೆ: ಸಇ 20 ಸಸಂನೋ 2008 ದಿನಾಂಕ: 16–10–2009.

(5) ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ತುಮಕೂರು ಇವರ ಪತ್ರ ಸಂಖ್ಯೆ CES/ 2010-11/01/2010 ದಿನಾಂಕ:15–4–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 17–9–1996ರ ಸರ್ಕಾರದ ಆದೇಶದಲ್ಲಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 25–9–2008ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ)ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 19–9–2008 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರಿಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 15–6–2009ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 19–3–2009 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 16–10–2009ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 19–9–2009 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ: 15–4–2010ರ ಪತ್ರದಲ್ಲಿ, ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ತುಮಕೂರು ಈ ಸಂಸ್ಥೆಯ ಸದಸ್ಯರ ನೋಂದಣಿ 1962 ರಲ್ಲಿ ಆಗಿದ್ದು, ಅಂದಿನಿಂದ ಇದುವರೆವಿಗೂ ಸದಸ್ಯತ್ವ ನೋಂದಣಿ ಆಗಿಲ್ಲ ಹಾಗೂ ಸದಸ್ಯತ್ವ ಶುಲ್ಕ ಪರಿಷ್ಕರಣೆ ಆಗಿಲ್ಲ. ಈಗ ಹೊಸದಾಗಿ ಆಡಳಿತ ಮಂಡಳಿಗೆ ಚುನಾವಣೆ ನಡೆಸಬೇಕಾದರೆ ಸದಸ್ಯರೆ ಇಲ್ಲದ ಪರಿಸ್ಥಿತಿ ನಿರ್ಮಾಣವಾಗಿದ್ದು, ಹೊಸದಾಗಿ ಸದಸ್ಯರನ್ನು ನೋಂದಣಿ ಮಾಡಿಕೊಳ್ಳುವುದು ಹಾಗೂ ಸದಸ್ಯತ್ವ ಶುಲ್ಕವನ್ನು ಪರಿಷ್ಕರಿಸುವುದು ಅನಿವಾರ್ಯವಾಗಿದ್ದು, ಮತ್ತು ಸಂಸ್ಥೆಯ ಉಪ ನಿಯಮಗಳನ್ನು ತಿದ್ದುಪಡಿಮಾಡಿಕೊಡಲು ಸರ್ಕಾರದ ಅನುಮತಿ ಕೋರಲಾಗಿದ್ದು, ಈ ವಿದ್ಯಾ ಸಂಸ್ಥೆಯು ಗ್ರಾಮಾಂತರ ಮಟ್ಟದ ವಿದ್ಯಾ ಸಂಸ್ಥೆಯಾಗಿದ್ದು, ಆಡಳಿತ ಮಂಡಳಿ ಸದಸ್ಯರ ಸಂಖ್ಯೆ ಅಧಿಕವಾದಷ್ಟು ಪರಸ್ಪರ ಭಿನ್ನಾಭಿಪ್ರಾಯ ಉಂಟಾಗಿ ಆಡಳಿತ ಮಂಡಳಿ ರಚನೆಯ ಹಿತದೃಷ್ಟಿಯಿಂದ ಮೇಲ್ಕಂಡ ಆಡಳಿತ ಮಂಡಳಿ ಸದಸ್ಯರ ಸಂಖ್ಯೆಯನ್ನು ಗರಿಷ್ಠ 9ಕ್ಕೆ ನಿಗದಿಪಡಿಸಿ ಸಂಸ್ಥೆಯ ಉಪ ನಿಯಮಗಳನ್ನು ತಿದ್ದುಪಡಿ ಮಾಡಿಕೊಡಲು ಸರ್ಕಾರದ ಮಾರ್ಗದರ್ಶನ ಕೋರುತ್ತಾ, ಪ್ರಸ್ತುತ ಆಡಳಿತಾಧಿಕಾರಿಗಳ ಅವಧಿ ದಿನಾಂಕ: 18–3–2010ಕ್ಕೆ ಪೂರ್ಣಗೊಂಡಿದ್ದು, ಆಡಳಿತ ಮಂಡಳಿಯ ಎರಡು ಗುಂಪುಗಳ ನಡುವೆ ಇದ್ದ ದಾವೆ ದಿನಾಂಕ: 21–3–2009 ರಂದು ಅಂತಿಮವಾಗಿ ತೀರ್ಮಾನವಾಗಿದ್ದು IN VIEW OF THE JOINT MEMO APPEAL IS DISMISSED AS NOT PRESSED FOR ಎಂದು ಆದೇಶವಾಗಿರುವ ಹಿನ್ನೆಲೆಯಲ್ಲಿ, ವಿದ್ಯಾ ಸಂಸ್ಥೆ, ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ: 19–3–2010 ರಿಂದ ಮುಂದಿನ ಆರು ತಿಂಗಳ ಅವಧಿಯವರೆಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಆಡಳಿತಾಧಿಕಾರಿಗಳು ಕೋರಿರುತ್ತಾರೆ.

ಆಡಳಿತಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 101 ಸಸಂನೋ 2010, ಬೆಂಗಳೂರು ದಿನಾಂಕ: 16–9–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ)ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ದಿನಾಂಕ: 19–3–2010 ರಿಂದ ಮತ್ತೆ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆಯನ್ನು ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆಯೂ ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 2477

## ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿನಿಂದ ಶ್ರೀ ವಿ.ಹೆಚ್.ಮರದ್ ಎಂ.ಇಡಿ. ಮಹಾವಿದ್ಯಾಲಯ. ಸತ್ತೂರು, ಧಾರವಾಡ ಇಲ್ಲಿನ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವ ಬಗ್ಗೆ.

**ಉಲ್ಲೇಖ :** 1) ಎನ್.ಸಿ.ಟಿ.ಇ ಪತ್ರ ಸಂಖ್ಯೆ: F.SRO/NCTE/2010-11/20672, ದಿನಾಂಕ: 25–8–2010.

2) ಕಾರ್ಯದರ್ಶಿ, ಶ್ರೀ ಬಸವೇಶ್ವರ ರೂರಲ್ ಎಜುಕೇಷನ್ ಅಂಡ್ ಡೆವಲಪ್ಮೆಂಟ್ ಟ್ರಸ್ಟ್, ಸತ್ತೂರು, ಧಾರವಾಡ ಇವರ ಪತ್ರ ದಿನಾಂಕ: 30–8–2010.

**ಪ್ರಸ್ತಾವನೆ:**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ./ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ.ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಶ್ರೀ ವಿ.ಹೆಚ್.ಮರದ್ ಎಂ.ಇಡಿ. ಮಹಾವಿದ್ಯಾಲಯ, ಸತ್ತೂರು, ಧಾರವಾಡ ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿನ ಆದೇಶಿಸಿರುತ್ತದೆ. ಅದರಂತೆ, ಉಲ್ಲೇಖ (2) ರಲ್ಲಿರುವ ಪತ್ರದಲ್ಲಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 229 ಯುಕೆವಿ 2010, ಬೆಂಗಳೂರು, ದಿನಾಂಕ: 17–9–2010**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ, ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು. 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2010–11ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಶ್ರೀ ವಿ.ಹೆಚ್.ಮರದ್ ಎಂ.ಇಡಿ. ಮಹಾವಿದ್ಯಾಲಯ, ಸತ್ತೂರು, ಧಾರವಾಡ ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2478 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿನಿಂದ ಶ್ರೀ ಸಿದ್ಧಿವಿನಾಯಕ ಗ್ರಾಮೀಣ ಪಿ.ಜಿ. ಎಂ.ಇಡಿ ಕಾಲೇಜು, ಹಾರೋಗೇರಿ, ರಾಯಭಾಗ, ಬೆಳಗಾವಿ ಜಿಲ್ಲೆ, ಇಲ್ಲಿನ ಎಂ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವ ಬಗ್ಗೆ.

**ಉಲ್ಲೇಖ :** 1) ಎನ್.ಸಿ.ಟಿ.ಇ ಪತ್ರ ಸಂಖ್ಯೆ: F.SRO/NCTE/2010-11/20637, ದಿನಾಂಕ: 24–8–2010.

2) ಸೋಲ್ ಟ್ರಸ್ಟೀ, ಶ್ರೀ ಎಸ್.ಎಸ್.ಜಂಬಗಿ ಮೆಮೋರಿಯಲ್ ಎಜುಕೇಷನ್ ಅಂಡ್ ಚಾರಿಟಬಲ್ ಟ್ರಸ್ಟ್, ಇವರ ಪತ್ರ ದಿನಾಂಕ: 1–9–2010.

**ಪ್ರಸ್ತಾವನೆ:**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುಂತೆ ಎನ್.ಸಿ.ಟಿ.ಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ.ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಅಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಆದೇಶದಲ್ಲಿ ಶ್ರೀ ಸಿದ್ಧಿವಿನಾಯಕ ಗ್ರಾಮೀಣ ಪಿ.ಜಿ. ಎಂ.ಇಡಿ. ಕಾಲೇಜು ಹಾರೋಗೇರಿ, ರಾಯಭಾಗ, ಬೆಳಗಾವಿ ಜಿಲ್ಲೆ, ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ಆದೇಶಿಸಿರುತ್ತದೆ. ಅದರಂತೆ, ಉಲ್ಲೇಖ (2) ರಲ್ಲಿರುವ ಪತ್ರದಲ್ಲಿ ಸಂಸ್ಥೆಯ ಸೋಲ್ ಟ್ರಸ್ಟೀಯವರು ತಮ್ಮ ಕಾಲೇಜಿನಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 232 ಯುಕೆವಿ 2010, ಬೆಂಗಳೂರು, ದಿನಾಂಕ: 17–9–2010**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2010–11ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಶ್ರೀ ಸಿದ್ಧಿವಿನಾಯಕ ಗ್ರಾಮೀಣ ಪಿ.ಜಿ. ಎಂ.ಇಡಿ. ಕಾಲೇಜು, ಹಾರೋಗೇರಿ, ರಾಯಭಾಗ, ಬೆಳಗಾವಿ ಜಿಲ್ಲೆ, ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2479 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿನಿಂದ ಬಿ.ವಿ.ವಿ.ಎಸ್. ಶಿಕ್ಷಣ ಮಹಾವಿದ್ಯಾಲಯ, ಬಾಗಲಕೋಟಿ, ಇಲ್ಲಿನ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವ ಬಗ್ಗೆ.

**ಉಲ್ಲೇಖ :** 1) ಎನ್.ಸಿ.ಟಿ.ಇ ಪತ್ರ ಸಂಖ್ಯೆ: F.SRO/NCTE/2010-11/20619, ದಿನಾಂಕ: 24–8–2010.

2) ಪ್ರಾಂಶುಪಾಲರು, ಬಿ.ವಿ.ವಿ.ಎಸ್. ಶಿಕ್ಷಣ ಮಹಾವಿದ್ಯಾಲಯ, ಬಾಗಲಕೋಟೆ, ಇವರ ಪತ್ರ ದಿನಾಂಕ: 25–8–2010.

**ಪ್ರಸ್ತಾವನೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಪಿ.ಇಡಿ./ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುಂತೆ ಎನ್.ಸಿ.ಟಿ.ಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ.ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಬಿ.ವಿ.ವಿ.ಎಸ್. ಶಿಕ್ಷಣ ಮಹಾವಿದ್ಯಾಲಯ , ಬಾಗಲಕೋಟೆ, ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ಆದೇಶಿಸಿರುತ್ತದೆ. ಅದರಂತೆ, ಉಲ್ಲೇಖ (2) ರಲ್ಲಿರುವ ಪತ್ರದಲ್ಲಿ ಕಾಲೇಜಿನ ಪ್ರಾಂಶುಪಾಲರು ತಮ್ಮ ಕಾಲೇಜಿಲ್ಲಿನ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 230 ಯುಕೆವಿ 2010, ಬೆಂಗಳೂರು, ದಿನಾಂಕ: 16-9-2010**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳ 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2010-11ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಬಿ.ವಿ.ವಿ.ಎಸ್. ಶಿಕ್ಷಣ ಮಹಾವಿದ್ಯಾಲಯ, ಬಾಗಲಕೋಟೆ, ಇಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2480 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ-ಮಂಡನಾಧಿಕಾರಿ ನೇಮಕ -ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 98 ಯುಇಸೇ 2005, ದಿ: 04.08.2010.

2. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ಪತ್ರ ಸಂಖ್ಯೆ: ಸಿವೈಎಸ್ಎಸ್/ಎಡಿಎಂ/ಸಿಸಿಎ/05-06, ದಿನಾಂಕ: 10.08.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 04.08.2010ರ ಸರ್ಕಾರಿ ಆದೇಶದಲ್ಲಿ ಶ್ರೀ ವಿ.ಕೆ.ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಆರ್.ಎಲ್.ಪಾಟೀಲ್, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು, ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ರವರು ಮೇಲೆ (2)ರಲ್ಲಿ ಓದಲಾದ ದಿ: 10.08.2010ರ ಪತ್ರದಲ್ಲಿ ಶ್ರೀ ಆರ್.ಎಲ್.ಪಾಟೀಲ್, ಜಂಟಿ ನಿರ್ದೇಶಕರು ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರದ ಪರ ಸಾಕ್ಷಿಗಳಲ್ಲಿ ಒಬ್ಬರಾಗಿ ಹೆಸರಿಸಲ್ಪಟ್ಟಿದ್ದು, ನಿಯಮಾನುಸಾರ ಅವರು ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಅವಕಾಶವಿರುವುದಿಲ್ಲವೆಂದು ತಿಳಿಸಿ ಅವರ ಬದಲಿಗೆ ಬೇರೊಬ್ಬ ಮಂಡನಾಧಿಕಾರಿಯನ್ನು ನೇಮಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 98 ಯುಇಸೇ 2005, ಬೆಂಗಳೂರು, ದಿನಾಂಕ: 21.09.2010.**

ಶ್ರೀ ವಿ.ಕೆ.ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಆರ್.ಎಲ್ ಪಾಟೀಲ್, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಅವರ ಬದಲಾಗಿ ಶ್ರೀ ಜಿತೇಂದ್ರ ಶೆಟ್ಟಿ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2481 ಯುವಜನ ಸೇವಾ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ರೇಷ್ಮೆ ವಿಸ್ತರಣಾಧಿಕಾರಿಗಳಾಗಿ ನೇಮಕಾತಿ ಹೊಂದಿದ ವಿನೋದ ಕೆ.ಎಸ್ ಹಾಗೂ ರೆಡ್ಡಿಲಕ್ಷ್ಮಿ.ವಿ-ಇವರುಗಳಿಗೆ ಕರ್ತವ್ಯಕ್ಕೆ ಹಾಜರಾಗಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂ: ವಾಕೈ 21 ರೇಸೇವಿ 2010 ದಿ: 03.09.2010.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂ: ಸಿಬ್ಬಂದಿ-1(4):ರೇವಿಅ: ನೇಮಕಾತಿ: 58: 2004-05 ದಿ: 17.9.2010
3. ವಿನೋದ ಕೆ.ಎಸ್. ಇವರು ದಿ: 20.09.2010 ರಂದು ಸಲ್ಲಿಸಿರುವ ಮನವಿ
4. ರೆಡ್ಡಿಲಕ್ಷ್ಮಿ.ವಿ ಇವರು ದಿ: 21.09.2010 ರಂದು ಸಲ್ಲಿಸಿರುವ ಮನವಿ

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ತಿದ್ದುಪಡಿ ನಿಯಮಗಳು 2007ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಆಯ್ಕೆಗೊಂಡ 28 ಅಭ್ಯರ್ಥಿಗಳಿಗೆ ಮೇಲೆ ಓದಲಾದ ಉಲ್ಲೇಖ (1)ರಲ್ಲಿ ನೇಮಕಾತಿ ಅಧಿಸೂನೆಯನ್ನು ಹೊರಡಿಸಿ, ಸದರಿ ಅಧಿಸೂಚನೆಯಲ್ಲಿ ನಮೂದಿಸಿರುವ ಷರತ್ತುಗಳಿಗೆ ಒಳಪಡಿಸಿ ಅಂತೆಯೇ ಸದರಿ ಅಧಿಸೂಚನೆಯಲ್ಲಿ 15

ದಿನಗಳೊಳಗಾಗಿ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಯ ಕರ್ತವ್ಯಕ್ಕೆ ಕಾರ್ಯವರದಿ ಮಾಡಿಕೊಳ್ಳಲು ಸೂಚಿಸಲಾಗಿತ್ತು. ಸದರಿ ಅಧಿಸೂಚನೆಯ ಕ್ರಮ ಸಂಖ್ಯೆ (6) ರಲ್ಲಿರುವ ವಿನೋದ ಕೆ.ಎಸ್. ಹಾಗೂ ಕ್ರಮ ಸಂಖ್ಯೆ (24) ರಲ್ಲಿರುವ ರೆಡ್ಡಿಲಕ್ಷ್ಮಿ.ವಿ ಇವರುಗಳು ನಿಗಧಿತ ಕಾಲಾವಧಿಯೊಳಗೆ ರೇಷ್ಮೆ ವಿಸ್ತರಣಾಧಿಕಾರಿಯ ಹುದ್ದೆಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ, ಸ್ಥಳ ಬದಲಾವಣೆ ಮಾಡಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಕಾಲಾವಕಾಶ ನೀಡಬೇಕೆಂದು, ಮೇಲೆ ಓದಲಾದ ಉಲ್ಲೇಖ (3) ಮತ್ತು (4)ರಲ್ಲಿ ಸರ್ಕಾರಕ್ಕೆ ಕ್ರಮವಾಗಿ ಮನವಿ ಮಾಡಿರುತ್ತಾರೆ. ಸರ್ಕಾರವು ಈ ವಿಷಯವನ್ನು ಪರಿಶೀಲಿಸಿದ್ದು, ಅದಕ್ಕಾಗಿ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 21 ರೇಸೇವಿ 2010 ಬೆಂಗಳೂರು ದಿನಾಂಕ: 25.09.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ವಿನೋದ ಕೆ.ಎಸ್. ಹಾಗೂ ರೆಡ್ಡಿಲಕ್ಷ್ಮಿ.ವಿ ಇವರುಗಳ ಮನವಿಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ), ನಿಯಮಗಳು 1977, ನಿಯಮ 18 (2)ರನ್ವಯ ಸರ್ಕಾರವು ಈ ಆದೇಶ ಹೊರಡಿಸಿದ 15 ದಿವಸಗಳ ಒಳಗಾಗಿ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರವರಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಕಾಲಾವಕಾಶ ನೀಡಿ ಆದೇಶಿಸಿದ್ದು, ಈ ಈರ್ವ ಅಭ್ಯರ್ಥಿಗಳ ಸ್ಥಳ ನಿಯುಕ್ತಿಯನ್ನು ಸಹ ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಹಿಂದೆ ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದ್ದ ಸ್ಥಳ | ಮಾರ್ಪಡಿಸಿ ಸ್ಥಳನಿಯುಕ್ತಿಗೊಳಿಸಿ ನೇಮಿಸಿದ ಸ್ಥಳ |
|---|---|---|---|
| 6 | ವಿನೋದ ಕೆ.ಎಸ್. ನಂ 528, 23ನೇ ಎ ಕ್ರಾಸ್, 19–ಎ ಮೇನ್ ಜ್ಯುಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು: 560065 | ತಾಂತ್ರಿಕ ಸೇವಾ ಕೇಂದ್ರ, ತಗಡೂರು, ಮೈಸೂರು ಜಿಲ್ಲೆ | ತಾಂತ್ರಿಕ ಸೇವಾ ಕೇಂದ್ರ ದೊಡ್ಡಬಳ್ಳಾಪುರ |
| 24 | ರೆಡ್ಡಿಲಕ್ಷ್ಮಿ.ವಿ ಡಾಟರ್ ಆಫ್ ವೆಂಕಟೇಶಯ್ಯ, ಮಾರುತಿನಗರ ಶ್ರೀನಿವಾಸಪುರ ಟೌನ್. ಕೋಲಾರ ಜಿಲ್ಲೆ | ತಾಂತ್ರಿ ಸೇವಾ ಕೇಂದ್ರ, ಹಲಸಹಳ್ಳಿ, ಮಂಡ್ಯ ಜಿಲ್ಲೆ | ತಾಂತ್ರಿಕ ಸೇವಾ ಕೇಂದ್ರ, ಕೋಲಾರ |

ಮೇಲ್ಕಾಣಿಸಿದ ಈರ್ವ ಅಭ್ಯರ್ಥಿಗಳು ಈ ಆದೇಶವನ್ನು ಹೊರಡಿಸಿದ ಹದಿನೈದು ದಿನಗಳೊಳಗಾಗಿ ರೇಷ್ಮೆ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು: 560001–ಇವರ ಬಳಿ ಕಾರ್ಯವರದಿ ಮಾಡಿಕೊಳ್ಳತಕ್ಕದ್ದು, ತಪ್ಪಿದಲ್ಲಿ ಇವರುಗಳ ನೇಮಕಾತಿಯು ತನ್ನಷ್ಟಕ್ಕೆ ತಾನೇ ರದ್ದಾಗಲಿದೆ.

ಮೇಲ್ಕಾಣಿಸಿದ ಈರ್ವ ಅಭ್ಯರ್ಥಿಗಳು ನಿಗದಿತ ಅವಧಿಯೊಳಗೆ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದಿರುವುದರಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾ) ನಿಯಮಗಳು 1977, ನಿಯಮ 18 (2)ರನ್ವಯ ಇವರಿಗೆ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಹೆಚ್ಚಿನ ಕಾಲಾವಕಾಶ ನೀಡಿರುವುದರಿಂದ ಇವರ ಜ್ಯೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತಾ) ನಿಯಮಗಳು 1957ರ ನಿಯಮ 5(2)ರನ್ವಯ ಇವರು ಸದರಿ ಹುದ್ದೆಯನ್ನು ವಹಿಸಿಕೊಂಡ ದಿನಾಂಕದಿಂದ ನಿರ್ಧರಿಸತಕ್ಕದ್ದು. ಮೇಲ್ಕಾಣಿಸಿದ ಮಾರ್ಪಾಡುಗಳನ್ನು ಹೊರತುಪಡಿಸಿ ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಲ್ಲಿ ಇನ್ನಿತರ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಡಿ.ಓಬಪ್ಪ**

ಸರ್ಕಾರದ ಉಪ ಕಾರ್ಯದರ್ಶಿ (ರೇ.ಸ)

ಪಿ.ಆರ್. 2482 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ 2010–11ರಿಂದ 2014–15ರವರೆಗೆ ಆಡಳಿತ ಮಂಡಳಿ ರಚಿಸಲು ಮತದಾನದ ಹಕ್ಕುಗಳ ಷರತ್ತುಗಳ ಸಡಿಲಿಕೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 144 ಸಿಎಲ್ಎಂ 2010 ದಿನಾಂಕ: 30.07.2010.

2. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 20(2)(ಬಿ)(iv).

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇವರ 2010–11ರಿಂದ 2014–15ರವರೆಗೆ ಆಡಳಿತ ಮಂಡಳಿ ರಚಿಸಲು ಆಯ್ಕೆ ಮಾಡಬೇಕಾದ 27 ನಿರ್ದೇಶಕರ ಪೈಕಿ ಕೇವಲ ನಾಲ್ಕು ಜನ ನಿರ್ದೇಶಕರು ಮಾತ್ರ ಅವಿರೋಧವಾಗಿ ಆಯ್ಕೆಯಾಗಿ ಉಳಿದ ಜಿಲ್ಲೆಗಳಿಂದ ಅರ್ಹ ಮತದಾರರು ಇಲ್ಲದ ಮೂಲಕ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(5) ಪ್ರಕಾರ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಸದರಿ ಬ್ಯಾಂಕಿಗೆ ಆಡಳಿತಗಾರರೆಂದು ಮೂರು ತಿಂಗಳ ಅವಧಿಗೆ ನೇಮಕ ಮಾಡಲಾಗಿದೆ. ಈ ಅವಧಿ ಮುಗಿದ ನಂತರ ಸಹ ಸದರಿ ಬ್ಯಾಂಕಿನ ಉಪನಿಯಮ ಸಂಖ್ಯೆ 24(1)ರಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 14ಇ ಪ್ರಕಾರ ಕಸ್ಕಾರ್ಡ್ ಬ್ಯಾಂಕಿನ ಆಡಳಿತ ಮಂಡಳಿಯನ್ನು ರಚಿಸಲು ಅಗತ್ಯವಾದ ಕೋರಂ ಆಗಲು ಸಾಧ್ಯವಿಲ್ಲವೆಂದು ತೀರ್ಮಾನಿಸಿ ಆಡಳಿತಗಾರರ ಅವಧಿಯನ್ನು ದಿನಾಂಕ: 28.01.2011ರವರೆಗೆ ವಿಸ್ತರಿಸಿ ಉಲ್ಲೇಖ (1)ರ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

ದೀರ್ಘಾವಧಿ ಕೃಷಿ ಪತ್ತಿನ ವ್ಯವಸ್ಥೆಯ ಪುನರುಜ್ಜೀವನಕ್ಕಾಗಿ ಭಾರತ ಸರ್ಕಾರವು ಪ್ರೊಫೆಸರ್ ಎ. ವೈದ್ಯನಾಥನ್ ಸಮಿತಿಯ ಆಧಾರದ ಮೇಲೆ ಪುನಃಶ್ಚೇತನ ಪ್ಯಾಕೇಜನ್ನು ಅನುಷ್ಠಾನಗೊಳಿಸುವ ಹಂತದಲ್ಲಿದೆ. ಈಗಾಗಲೇ ಈ ದಿಸೆಯಲ್ಲಿ ರಾಜ್ಯ ಸರ್ಕಾರವು ಅನೇಕ ಕ್ರಮಗಳನ್ನು ಕೈಗೊಂಡಿದ್ದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ1959 ಅನ್ನು ತಿದ್ದುಪಡಿ ಮಾಡಿ ಪ್ರಕರಣ **98 'ಕ್ಯೂ'** ಅನ್ನು ಅಳವಡಿಸಲಾಗಿದೆ ಹಾಗೂ ಈ ಮೇರೆಗೆ ಸದರಿ ಬ್ಯಾಂಕಿನ ಚುನಾವಣೆಯನ್ನು ಆರು ತಿಂಗಳ ಅವಧಿ ಮುಕ್ತಾಯಗೊಳ್ಳುವ ಪೂರ್ವದಲ್ಲಿ ಚುನಾವಣೆ ಜರುಗಿಸಬೇಕಾಗುತ್ತದೆ. ಮುಂದುವರಿದು, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸುಭದ್ರಗೊಳಿಸುವ ದೃಷ್ಟಿಯಿಂದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಕಸ್ಕಾರ್ಡ್ ಬ್ಯಾಂಕಿಗೆ ಆಡಳಿತ ಮಂಡಳಿಯ ಚುನಾವಣೆಯನ್ನು ಜರುಗಿಸಲು ಅವಶ್ಯವಾಗಿದೆ ಎಂದು ಸರ್ಕಾರವು ಅಭಿಪ್ರಾಯಕ್ಕೆ ಬರಲಾಗಿದೆ. ಆದರೆ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 20(2)(ಬಿ)(iv)ರ ಷರತ್ತುಗಳ ಮೇರೆಗೆ ಪಿಕಾರ್ಡ್ ಬ್ಯಾಂಕುಗಳು ಶೇಕಡಾ 75ರಷ್ಟು ಸಾಲ ವಸೂಲಾತಿ ಮಾಡುವುದು ಕಡ್ಡಾಯವಾಗಿರುತ್ತದೆ. ಈ ಪರಿಸ್ಥಿತಿಯಲ್ಲಿ ಚುನಾವಣೆಯನ್ನು ಜರುಗಿಸಿದಲ್ಲಿ ಅವಶ್ಯಕ ಕೋರಂ ಆಗುವುದಿಲ್ಲ. ಆದ್ದರಿಂದ, ಈ ಷರತ್ತನ್ನು ಸಡಿಲಿಸಿ, ಕಸ್ಕಾರ್ಡ್ ಬ್ಯಾಂಕಿಗೆ ಇರುವ ಬೇಡಿಕೆಯನ್ನು ದಿನಾಂಕ: 15.04.2010ರೊಳಗಾಗಿ ಪಿಕಾರ್ಡ್ ಬ್ಯಾಂಕುಗಳು ಪೂರ್ತಿಯಾಗಿ ಪಾವತಿಸಿದಲ್ಲಿ ಅಂತಹ ಪಿಕಾರ್ಡ್ ಬ್ಯಾಂಕುಗಳು ಚುನಾವಣೆಯಲ್ಲಿ ಭಾಗವಹಿಸಲು ಅರ್ಹತೆ ಹೊಂದಿ ಮತ ಚಲಾಯಿಸಲು ಅವಕಾಶ ನೀಡಿದಲ್ಲಿ ಕಸ್ಕಾರ್ಡ್ ಬ್ಯಾಂಕಿನ ಆಡಳಿತ ಮಂಡಳಿಯ ರಚನೆಗೆ ಕೋರಂ ಆಗುವ ಸಾಧ್ಯತೆ ಇದೆ ಎಂಬ ಅಂಶವನ್ನು ಸರ್ಕಾರವು ಮನಗಂಡಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 177 ಸಿಎಲ್ಎಂ 2010, ದಿನಾಂಕ: 17.09.2010**

ಮೇಲ್ಕಂಡ ವಿವರಗಳ ಅನ್ವಯ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಪ್ರಕರಣ 20(2)(ಬಿ)(iv)ರಡಿಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ದಿನಾಂಕ: 31.03.2010ಕ್ಕೆ ಇದ್ದಂತೆ ಬೇಡಿಕೆಯ ಶೇಕಡಾ 75ರ ವಸೂಲಾತಿ ಮಾಡಬೇಕೆಂಬ ಕರಾರಿನಿಂದ ವಿನಾಯಿತಿ ನೀಡಿ, ಅಂತಹ ಬ್ಯಾಂಕುಗಳು ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿಗೆ ದಿನಾಂಕ: 31.03.2010ಕ್ಕೆ ಇದ್ದ ಬೇಡಿಕೆಯನ್ನು ಪೂರ್ತಿಯಾಗಿ ದಿನಾಂಕ: 15.04.2010ರೊಳಗಾಗಿ ಪಾವತಿಸಿದಲ್ಲಿ ಅಂತಹ ಪಿಕಾರ್ಡ್ ಬ್ಯಾಂಕುಗಳು ಚುನಾವಣೆ ಹಾಗೂ ಮಹಾಸಭೆಯಲ್ಲಿ ಸ್ಪರ್ಧಿಸಲು ಹಾಗೂ ಮತ ನೀಡಲು ಅರ್ಹತೆಯನ್ನು ನೀಡಿ ಆದೇಶಿಸಿದೆ. ಈ ಆದೇಶವು ದಿನಾಂಕ: 31.12.2010 ರವರೆಗೆ ಜಾರಿಯಲ್ಲಿರತಕ್ಕದ್ದು. ತದನಂತರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 20(2)(ಬಿ)(iv)ರಡಿಯಂತೆ ಯಥಾಪ್ರಕಾರ ಜಾರಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್.ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 2483

## INFRASTRUCTURE DEVELOPMENT SECRETARIAT

**Sub :** Servicing of HUDCO Loan availed for procurement of land for Bangalore international Airport Project.

**Read :**

1. G.O. No. IDD 47 DIA 2006 dated 29-06-2007.
2. G.O. No. IDD 47 DIA 2006 (P) dated 24.09.2007.
3. G.O. No. IDD 47 DIA 2006 (P) dated 25.09.2007.
4. G.O. No. IDD 47 DIA 2006 (P) dated 03.12.2007.
5. G.O. No. IDD 47 DIA 2006 dated 25.03.2008.
6. G.O. No. IDD 47 DIA 2006 dated 23.06.2008.
7. G.O. No. IDD 47 DIA 2007 dated 16.09.2008.
8. G.O. No. IDD 47 DIA 2007 dated 15.12.2008.
9. G.O. No. IDD 47 DIA 2006 dated 13.3.2009.
10. G.O. No. IDD 47 DIA 2006 dated 12.08.2009.
11. G.O. No. IDD 47 DIA 2006 dated 26.09.2009.
12. G.O. No. IDD 47 DIA 2006 dated 17.12.2009.
13. G.O. No. IDD 33 DIA 2010 dated 23.03.2010.
14. G.O. No. IDD 33 DIA 2010 dated 22.06.2010.
15. Letter No. DGM (IPD)/ 1349/ 2010-2011 dated. 06.09.2010 of the Dy. General Manager (IPD-I), KSIIDC.

**Preamble:**

In the G.O's read at SI.No. (1) to (14) above, periodical release of funds have been made to KSIIDC for servicing HUDCO loan for the period 2007, 2008 and 2009.

2. In the letter dated 06.09.2010 read at SI.No. (15) above, the Deputy General Manager (IPD-I), KSIIDC has requested for release of an amount of Rs. 399.20 lakhs (Principal) Rs. 272.58 lakhs + Interest Rs. 119.39 lakhs + Service Charges Rs. 7.23 lakhs) towards servicing of HUDCO loan for the quarter ending September 2010.

3. Government have considered release of funds for servicing of HUDCO loan for the quarter ending June 2010 and hence the following order.

**GOVERNMENT ORDER NO : IDD 33 DIA 2010, BANGALORE DATED : 23.09.2010**

After careful examination of the proposal, sanction of the Government is hereby accorded for release of Rs. 391.97 lakhs (Rupees Three crore Ninety One lakhs and ninety seven thousand only) to KSIIDC under the Head of Account ***"5465-01-190-1-04 (P)- BIAP Assistance for repayment of HUDCO loan- 240 Debt Servicing"*** towards HUDCO loan service for the quarter ending September 2010, out of the Budget Provision of Rs. 2599.00 lakhs in 2010-11.

2) The Managing Director, KSIIDC is authorized to draw the amount on a payees receipt duly countersigned by the Under Secretary to Government, Infrastructure Development Department.

3) This order is issued in accordance with the delegation fo Financial Powers to Principal Secretaries / Secretaries to Government vide G.O.No. Fd 1 TFP 2008 dated 16.5.2008.

By order and in the name of the Governor of Karnataka

**K.S.Venugopal**

Under Secretary to Government, (i/c)

Infrastructure Development Department

P.R. 2484

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :** 1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಲ್–52/ಸಿಆರ್–5/2009 ಹಾವೇರಿ ದಿನಾಂಕ: 07–07–2010.

2) ತನಿಖಾಧಿಕಾರಿಯ ವರದಿ ದಿನಾಂಕ: 22.02.2010

3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

4) ಸರ್ಕಾರದ ಆದೇಶ ಸಂಖ್ಯೆ ಒಇ 231 ಪಿಪಿಇ ದಿನಾಂಕ: 17.8.2010.

**ಪ್ರಸ್ತಾವನೆ:**

ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ಗುನ್ನೆ ಸಂ: 5/2009ರಲ್ಲಿ ಆರಕ್ಷರ ನಿರೀಕ್ಷಕರು, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರ ದಿನಾಂಕ: 07.07.2010ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ–1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖ (1)ರ ಪತ್ರ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಶಾಂತಪ್ಪ ಫಕ್ಕೀರಪ್ಪ ತಳವಾರ, ಸಾ: ಕೆಂಗಾಪುರ, ಶಿಗ್ಗಾಂವ್, ಹಾವೇರಿ ಜಿಲ್ಲೆ ಇವರ ಫಿರ್ಯಾದಿ ದಿನಾಂಕ:24.11.2009
2. ಪ್ರಥಮ ವರ್ತಮಾನ ವರದಿ ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ–5/2009
3. ಪ್ರಾಯೋಗಿಕ ಪಂಚನಾಮೆ ದಿನಾಂಕ: 25.11.2009
4. ಟ್ರ್ಯಾಪ್ ಮಹಜರ್ ದಿನಾಂಕ: 25.11.2009
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ LYK/ACE/DWD/15:2009, ದಿನಾಂಕ:22.12.2009.
6. ಕೃತ್ಯ ನಡೆದ ಸ್ಥಳದ ನಕಾಶೆ:
7. ಸಾಕ್ಷಿಗಳ ಹೇಳಿಕೆಗಳು:
    1. ಶ್ರೀ ಶಾಂತಪ್ಪ ಫಕ್ಕೀರಪ್ಪ ತಳವಾರ
    2. ಶ್ರೀ ರಮೇಶ ಶಂಕ್ರಪ್ಪ ಕನಕಪ್ಪನವರ
    3. ಶ್ರೀ ಪ್ರಭಾಕರ ಶಿವಪ್ಪ ಕುಂದೂರ
    4. ಶ್ರೀ ಸುನೀಲ್ ಆನಂದ ಅರಕೇರಿ
    5. ಶ್ರೀ ನಾಗರಾಜ. ಎಸ್
    6. ಶ್ರೀ ಶಾಂತಪ್ಪ ಹೆಗ್ಗಪ್ಪಬಾರ್ಕಿ
    7. ಶ್ರೀ ಗಂಗಾಧರ ರಾಮ್‌ರಸಾಳ್ಕರ್
    8. ಶ್ರೀ ಬಿ.ಕಾಶೀನಾಥ
    9. ಶ್ರೀ ನಿಂಗಪ್ಪ ಗುಡ್ಡಪ್ಪ ಕನವಳ್ಳಿ
    10. ಶ್ರೀ ಉದಯಕುಮಾರ ಕೃಷ್ಣರಾವ್ ಕುಲಕರ್ಣಿ

11. ಶ್ರೀ ಸಿದ್ದಪ್ಪ ಬಸಪ್ಪ ಬಸವನಾಯ್ಕರ
12. ಶ್ರೀ ಎಂ.ವಿ.ಮಡಿವಾಳರ್
13. ಶ್ರೀ ಎಸ್.ಎನ್.ಹಿರೇಮಠ
14. ಶ್ರೀ ಕುಮಾರಸ್ವಾಮಿ ಎಂ ಹಿರೇಮಠ
15. ಶ್ರೀ ಎಂ.ಡಿ. ಹಿರೇಮಠ

8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ ಎಸ್.ಸಿ/ಎಸ್.ಟಿ.ಸಂ. 6/06, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇಲ್ಲಿ ಸಾಕ್ಷಿಗಳಿಗೆ ಸೂಕ್ತ ತಿಳುವಳಿಕೆ ನೀಡಿ ಸಮರ್ಥವಾಗಿ ಕೇಸನ್ನು ನ್ಯಾಯಾಲಯದ ಮುಂದೆ ಮುಂಡಿಸಲು ಫಿರ್ಯಾದುದಾರರಿಂದ ಲಂಚ ಕೇಳಿದ್ದಕ್ಕೆ ಸಂಬಂಧಿಸಿರುತ್ತದೆ.

9. ಆಪಾಧಿತರ ಸಮಜಾಯಿಷಿ ಹೇಳಿಕೆಗಳು

10. ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ಸ್ವಖುಷಿ ಹೇಳಿಕೆ

ತನಿಖಾಧಿಕಾರಿಗಳಾದ ಶ್ರೀ ಜಿ.ಗುರುದತ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಹಾವೇರಿ ಇವರು, ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಹಾವೇರಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 5/2009ರಲ್ಲಿ ಲಂಚ ನಿರೋಧಕ ಕಾಯ್ದೆ–1988ರ ಕಲಮ್ 7,13(1)(ಡಿ) ಸಹ ಕಲಂ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾಧಿತರಾದ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರು ಪಿರ್ಯಾದಿ ಶ್ರೀ ಶಾಂತಪ್ಪ ಫಕ್ಕೀರಪ್ಪ ತಳವಾರ, ಕೆಂಗಾಪುರ ಗ್ರಾಮ, ಶಿಗ್ಗಾಂವ್, ಹಾವೇರಿ ಜಿಲ್ಲೆ ಇವರ ಪಿರ್ಯಾದಿ ದಿನಾಂಕ: 24.11.2009, ಎಸ್.ಸಿ./ಎಸ್.ಟಿ.ಸಂ. 6/06, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇಲ್ಲಿ ಸಾಕ್ಷಿಗಳಿಗೆ ಸೂಕ್ತ ತಿಳುವಳಿಕೆ ನೀಡಿ ಸಮರ್ಥವಾಗಿ ಕೇಸನ್ನು ನ್ಯಾಯಾಲಯದ ಮುಂದೆ ಮಂಡಿಸುವ ಇವರ ಸರ್ಕಾರಿ ಕೆಲಸವನ್ನು ಮಾಡಲು ರೂ. 1,500/– ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಪಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 25.11.09ರಂದು ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರು ಅಕ್ರಮ ಸಂಭಾವನೆಯಾದ 1,500/– ರೂಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾಧಿತ ಸಾರ್ವಜನಿಕ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾಧಿ ಹಾಗೂ ಆಪಾಧಿತ ಸಾರ್ವಜನಿಕ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ ಅಕ್ರಮ ಸಂಭಾವನೆಯಾದ ರೂ. 1500/– ಗಳನ್ನು ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ ಸರ್ಕಾರಿ ಅಭಿಯೋಜಕರು (ಹಣ ಪಡೆದ ವ್ಯಕ್ತಿ) ಇವರಿಂದ ಆಪಾಧಿತರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದ್ದು, ಲೋಕಾಯುಕ್ತ ಅಧಿಕಾರಿಗಳು ಒದಗಿಸಿರುವ ಎಲ್ಲಾ ದಾಖಲೆಗಳನ್ನು ಸಾಕ್ಷಿಗಳ ಹೇಳಿಕೆಗಳನ್ನು ಸಂದರ್ಭಗಳನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ ಆರೋಪಿತ ಸರ್ಕಾರಿ ಅಧಿಕಾರಿಯು ಫಿರ್ಯಾದುದಾರಿಂದ ಲಂಚದ ಹಣ ರೂ.1500/–ಗಳನ್ನು ಸ್ವೀಕರಿಸಿರುವುದು ದೃಢಪಡುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾಧಿತರು ಲಂಚ ನಿರೋಧ ಕಾಯ್ದೆ–1988ರ ಕಲಂ. 7,13,(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988ರ ಅನ್ವಯ ಕಲಂ. 7,13,(1)(ಡಿ)ರ ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತನನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಲಂಚ ನಿರೋಧಕ ಕಾಯ್ದೆ–1988 ರಕಲಂ 19(1)(ಬಿ)ರ ರಡಿ ಆಪಾಧಿತ ಸಾರ್ವಜನಿಕ ಅಧಿಕಾರಿಯಾದ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರನ್ನು ಕಲಂ: 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿರುತ್ತದೆ. ಅದರಂತೆ ಮೇಲೆ 4ರಲ್ಲಿ ಓದಲಾದ ಸರ್ಕಾರದ ಆದೇಶ ದಿ: 17–8–2010ರಲ್ಲಿ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸಲಾಗಿತ್ತು. ಆದರೆ ಸದರಿ ಸರ್ಕಾರದ ಆದೇಶದಲ್ಲಿ ಕೆಲವು ನ್ಯೂನತೆಗಳು ಕಂಡುಬಂದಿದ್ದರಿಂದ ಮೇಲೆ 4ರಲ್ಲಿ ಓದಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 231 ಪಿಪಿಇ 2010 ದಿನಾಂಕ: 24.09.2010**

ಸರ್ಕಾರದ ಆದೇಶ ಸಂಖ್ಯೆ: ಒಇ 231 ಪಿಪಿಇ 2010, ದಿನಾಂಕ: 17.08.2010ನ್ನು ರದ್ದುಪಡಿಸಿದೆ, ಲಂಚ ನಿರೋಧ ಕಾಯ್ದೆ 1988 ಕಲಂ 19(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇವರ ವಿರುದ್ಧ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ–1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 24.09.2010 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

ಪಿ.ಆರ್. 2485 (ಕಾ ಮತ್ತು ಸು, ಕಾಫಿಪೋಸ ಮತ್ತು ಅಭಿಯೋಗ)

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಒಇ 213 ಪಿಪಿಇ 2010 ಬೆಂಗಳೂರು, ದಿನಾಂಕ: 24.09.2010**

ಸರ್ಕಾರದ ಆದೇಶ ಸಂಖ್ಯೆ: ಒಇ 361 ಪಿಪಿಇ 2009, ದಿನಾಂಕ: 23.10.2009ರಲ್ಲಿ ವೇತನ, ಸೇವಾ ಷರತ್ತು ಮತ್ತು ನಿಬಂಧನೆಗಳ ಕ್ರಮ ಸಂಖ್ಯೆ 19ರಲ್ಲಿ "ಸದರಿಯವರ ವೇತನವನ್ನು 2014–ನ್ಯಾಯ ಪರಿಪಾಲನೆ–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ–002 ಅಧಿಕಾರಿಗಳ ವೇತನ ಈ ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು" ಎಂಬುದರ ಜೊತೆಗೆ "ಒಳಾಡಳಿತ ಇಲಾಖೆಯ ವ್ಯಾಪ್ತಿಯಲ್ಲಿ ಬರುವ 30 ತ್ವರಿತ ವಿಲೇವಾರಿ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರುಗಳಿಗೆ ಸಂಬಂಧಿಸಿದಂತೆ ಸದರಿಯವರ ವೇತನವನ್ನು 2014–0–800–1–00–EFC Grants for upgradation of Judicial Administration-101-Grant-in-Aid ಈ ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು ಎಂಬುದಾಗಿ ಸಂಖ್ಯೆ: ಒಇ 213 ಪಿಪಿಇ 2010 ದಿನಾಂಕ: 25.08.2010ರ ಸೇರ್ಪಡೆಯ ಆದೇಶದ 6 ಮತ್ತು 7ನೇ ಸಾಲಿನಲ್ಲಿ ನಮೂದಿಸಲಾಗಿತ್ತು. ಸದರಿ ಸೇರ್ಪಡೆ ಆದೇಶದ 6 ಮತ್ತು 7 ನೇ ಸಾಲಿನಲ್ಲಿ ನಮೂದಿಸಿದ "2014–0–800–1–00–EFC Grants for upgradation of Judicial Administration-101-Grant-in-Aid ರ ಬದಲಾಗಿ "2014–00–800–1–02–ತ್ವರಿತ ನ್ಯಾಯಾಲಯಗಳು" ಎಂದು ಓದಿಕೊಳ್ಳತಕ್ಕದ್ದು

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

ಪಿ.ಆರ್. 2486 (ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ರಚಿಸಲಾಗಿದ್ದ ಸಲಹಾ ಮಂಡಳಿಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 258 ಪಿಆರ್‌ಎ 2008, ದಿ: 02.06.2010.

2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪದನಿಮಿತ್ತ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಯವರ ದಿನಾಂಕ: 23/09/2010ರ ಟಿಪ್ಪಣಿ ಕ್ರಮ ಸಂಖ್ಯೆ: ಮುಮಂಆಕಾ: 3188:2010,

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿ: 02.06.2010ರ ಆದೇಶದಲ್ಲಿ ಗುಲ್ಬರ್ಗಾ ಕೇಂದ್ರ ಕಾರಾಗೃಹದಲ್ಲಿ ದೀರ್ಘಾವಧಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳನ್ನು ವಿಮರ್ಶಿಸುವ ಸಲುವಾಗಿ 1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 192ನೇ ನಿಯಮದ ಅನ್ವಯ ಸರ್ಕಾರವು ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸಲು ಆದೇಶಿಲಾಗಿತ್ತು.

ಈಗ ಆ ಆದೇಶವನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 258 ಪಿಆರ್‌ಎ 2008, ಬೆಂಗಳೂರು, ದಿನಾಂಕ: 24/09/2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ: 02.06.2010ರಂದು ಸರ್ಕಾರದಿಂದ ಹೊರಡಿಸಿದ ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ರಚಿಸಲಾಗಿದ್ದು ಸಲಹಾ ಮಂಡಳಿ ಆದೇಶವನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2487 ಒಳಾಡಳಿತ ಇಲಾಖೆ, (ಸೆರೆಮನೆ ಮತ್ತು ಸಿನಿಮಾ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಚಿವ ಸಂಪುಟ ಶಾಖೆಗೆ ಅಳವಡಿಸಲು ಒಂದು ಲೇಸರ್ ಜೆಟ್ ಹೊಸ ಫ್ಯಾಕ್ಸ್ ಯಂತ್ರವನ್ನು ಖರೀದಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ) ಇವರ ಅ.ಟಿ.ಸಂಖ್ಯೆ: ಡಿಸಿಎ (ಎಂ) 55/2010 ದಿನಾಂಕ: 14–07–2010

2) ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯ ದರಪಟ್ಟಿ ದಿನಾಂಕ: 18–05–2010.

3) ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 222 ಡಿಟಿಎನ್ 2010 ದಿನಾಂಕ: 23–08–2010.

4) ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯ ಬಿಲ್ ಸಂಖ್ಯೆ: 182 ದಿನಾಂಕ: 26–08–10

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಅನಧಿಕೃತ ಟಿಪ್ಪಣಿಯಲ್ಲಿ ಸಚಿವ ಸಂಪುಟ ಶಾಖೆಯಲ್ಲಿ ಉಪಯೋಗಿಸುತ್ತಿರುವ ಫ್ಯಾಕ್ಸ್ ಯಂತ್ರವು ಕೆಟ್ಟು ಹೋಗಿದ್ದು ಸಚಿವ ಸಂಪುಟ ಸಭೆ ಮತ್ತು ಸಚಿವ ಸಂಪುಟ ಉಪಸಮಿತಿ ಸಭೆಯ ಸೂಚನಾ ಪತ್ರಗಳನ್ನು ಹಾಗೂ ಇತರೆ ತುರ್ತು ಕಾಗದ ಪತ್ರಗಳನ್ನು ರಾಜಭವನ ಮತ್ತು ವಿವಿಧ ಇಲಾಖೆಗಳ ಕಾರ್ಯದರ್ಶಿಗಳಿಗೆ ಫ್ಯಾಕ್ಸ್ ಮಾಡಲು ಫ್ಯಾಕ್ಸ್ ಯಂತ್ರದ ಸೇವೆ ಇಲ್ಲದೆ ತೊಂದರೆಯಾಗಿದೆ. ಆದ್ದರಿಂದ ಶಾಖೆಗೆ ಪ್ಯಾನಾಸೋನಿಕ್ ಕೆಎಕ್ಸ್–ಎಂಬಿ–772 ಮಾದರಿಯ ಫ್ಯಾಕ್ಸ್ ಯಂತ್ರವನ್ನು ಸಚಿವ ಸಂಪುಟ ಶಾಖೆಗೆ ಅಳವಡಿಸಬೇಕೆಂದು ಸರ್ಕಾರದ

ಮುಖ್ಯ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿ (ಸಚಿವ ಸಂಪುಟ) ಇವರು ಕೋರಿರುತ್ತಾರೆ. ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿಯವರ ಕಛೇರಿಗೆ ಅಳವಡಿಸಲು ಹೊಸ ಲೇಸರ್ ಜೆಟ್ ಪ್ಯಾನಾಸೋನಿಕ್ ಎಂಎಫ್‌ಡಿ ಕೆಎಕ್ಸ್–ಎಂಬಿ 772 ಸಿಎಕ್ಸ್–5 ಮಾದರಿಯ ಫ್ಯಾಕ್ಸ್ ಯಂತ್ರವನ್ನು ಖರೀದಿಸುವ ಸಂಬಂಧ ಆರು ಸಂಸ್ಥೆಗಳಿಂದ ದರ ಪಟ್ಟಿಯನ್ನು ಕರೆಯಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಪತ್ರದಲ್ಲಿ ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ಬೆಂಗಳೂರು ಸಂಸ್ಥೆಯು ಪ್ಯಾನಾಸೋನಿಕ್ ಎಂಎಫ್‌ಡಿ ಕೆಎಕ್ಸ್–ಎಂಬಿ772 ಸಿಎಕ್ಸ್–5 ಮಾದರಿಯ ಫ್ಯಾಕ್ಸ್ ಉಪಕರಣವೊಂದಕ್ಕೆ ಅತಿ ಕಡಿಮೆ ದರ ಅಂದರೆ ರೂ.18,900.00 (ತೆರಿಗೆ ಸೇರಿ) ಮೊತ್ತವನ್ನು ನಮೂದಿಸಿರುತ್ತದೆ. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಪತ್ರದಲ್ಲಿ 01 (ಒಂದು) ಹೊಸ ಲೇಸರ್ ಜೆಟ್ ಪ್ಯಾನಾಸೋನಿಕ್ ಎಂಎಫ್‌ಡಿ ಕೆಎಕ್ಸ್–ಎಂಬಿ772 ಸಿಎಕ್ಸ್–5 ಮಾದರಿಯ ಫ್ಯಾಕ್ಸ್ ಯಂತ್ರವನ್ನು ರೂ. 18.900 (ತೆರಿಗೆ ಸೇರಿ) ವೆಚ್ಚದಲ್ಲಿ ಖರೀದಿಸಿ ಒದಗಿಸುವಂತೆ ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಈ ಸಂಸ್ಥೆಯು ಫ್ಯಾಕ್ಸ್ ಯಂತ್ರವನ್ನು ಖರೀದಿಸಿ ಅಳವಡಿಸಿದ್ದು ಮೇಲೆ ಕ್ರಮ ಸಂಖ್ಯೆ (4)ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 222 ಡಿಟಿಎನ್ 2010, ಬೆಂಗಳೂರು ದಿನಾಂಕ: 21–09–2010**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಸಚಿವ ಸಂಪುಟ ಶಾಖೆ, ವಿಧಾನಸೌಧ, ಇಲ್ಲಿನ ಕಛೇರಿಗೆ 01 ಒಂದು ಹೊಸ ಲೇಸರ್ ಜೆಟ್ ಪ್ಯಾನಾಸೋನಿಕ್ ಎಂಎಫ್‌ಡಿ ಕೆಎಕ್ಸ್–ಎಂಬಿ772 ಸಿಎಕ್ಸ್–5 ಮಾದರಿಯ ಫ್ಯಾಕ್ಸ್ ಯಂತ್ರವನ್ನು ಖರೀದಿಸಿ ಅಳವಡಿಸಿರುವ ವೆಚ್ಚ ಒಟ್ಟು ರೂ. 18,900.00 (ರೂ.ಹದಿನೆಂಟು ಸಾವಿರದ ಒಂಭೈನೂರು ಮಾತ್ರ) (ತೆರಿಗೆ ಸೇರಿ)ಗಳನ್ನು ಮೆ:ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ನಂ.31/l, 2ನೇ ಅಡ್ಡ ರಸ್ತೆ, ಸಿ.ಕೆ.ಸಿ. ಗಾರ್ಡನ್, ಲಾಲ್‌ಬಾಗ್ ರಸ್ತೆ, ಬೆಂಗಳೂರು ಸಂಸ್ಥೆಗೆ ಪಾವತಿ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2013–ಮಂತ್ರಿಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇಲಾಖೆ (ಕಾರ್ಯಕಾರಿ)

ಪಿ.ಆರ್. 2488

## ಸಿಬ್ಬಂದಿ ಮತ್ತು ಆಡಳಿತ ಸುಧಾರವಣಾ ಸಚಿವಾಲಯ

**ವಿಷಯ :** ಶ್ರೀ ಜಿ.ಸಿ ಅನಿಲ್ ಕುಮಾರ್, ಕೆಎಎಸ್ (ಹಿರಿಯ ಶ್ರೇಣಿ), ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಪೂರ್ವ, ಬೆಂಗಳೂರು, ಶ್ರೀ ಕೆ.ಬಿ.ಚಿಕ್ಕಬೆಟ್ಟಯ್ಯ, ಕೆಎಎಸ್ (ಕಿರಿಯ ಶ್ರೇಣಿ), ನಿಯೋಜನೆ ಮೇಲೆ ಸಹಾಯಕ ಆಯುಕ್ತರು, ಗ್ಯಾಸ್ ಅಥಾರಿಟಿ ಆಫ್ ಇಂಡಿಯಾ ಲಿಮಿಟೆಡ್, ಬೆಂಗಳೂರು ಮತ್ತು ಶ್ರೀ ಹೆಚ್. ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರುಗಳನ್ನು ಸೇವೆಯಿಂದ ಅಮಾನತ್ತುಪಡಿಸುವ ಬಗ್ಗೆ

**ಪ್ರಸ್ತಾವನೆ :**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವತಿಯಿಂದ ಕೈಗಾರಿಕಾ ವಸಾಹತನ್ನು ಅಭಿವೃದ್ಧಿಪಡಿಸುವ ಸಲುವಾಗಿ, ದೇವನಹಳ್ಳಿ ತಾಲ್ಲೂಕು, ಜಾಲ ಹೋಬಳಿಯ ದುಮ್ಮನಹಳ್ಳಿ, ಸಿಂಗನಹಳ್ಳಿ, ಹುಣಸೂರು, ಬಾಲದಿಮ್ಮನಹಳ್ಳಿ, ಕವಡದಾಸನಹಳ್ಳಿ, ಭಟ್ಟಮಾರನಹಳ್ಳಿ, ಬಾಗಲೂರು ಇತ್ಯಾದಿ ಹಳ್ಳಿಗಳಲ್ಲಿನ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಂಡು ಪರಿಹಾರ ವಿತರಿಸುವಲ್ಲಿ ಹಲವು ಅವ್ಯವಹಾರಗಳು ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ, ಈ ಬಗ್ಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ವತಿಯಿಂದ ಸಮಗ್ರ ತನಿಖೆ ಕೈಗೊಳ್ಳಲಾಗಿದ್ದು, ಈ ಅವ್ಯವಹಾರಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಹಲವು ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ಶಾಮೀಲಾಗಿರುವುದು / ಪಾಲ್ಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ.

ಬೆಂಗಳೂರು ಸುತ್ತಮುತ್ತಲಿನ ಜಮೀನುಗಳನ್ನು ಕೈಗಾರಿಕಾ ಅಭಿವೃದ್ಧಿ ಸಲುವಾಗಿ ಸ್ವಾಧೀನಪಡಿಸಿಕೊಳ್ಳುವಲ್ಲಿ ಹಲವು ಅಕ್ರಮಗಳು ನಡೆದಿದ್ದು, ಇವುಗಳ ಬಗ್ಗೆ ಪೂರ್ಣ ತನಿಖೆ ಆಗುವ ತನಕ ಯಾವುದೇ ಪರಿಹಾರವನ್ನು ವಿತರಿಸಬಾರದೆಂದು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಸಂಬಂಧಿಸಿದ ಅಧಿಕಾರಿಗಳಿಗೆ ಸೂಚನೆ ನೀಡಿದ್ದರೂ ಸಹ ಅದನ್ನು ಉಲ್ಲಂಘಿಸಿ ಪರಿಹಾರ ನೀಡಿರುವುದು, ಸರ್ಕಾರದ ಜಮೀನುಗಳಿಗೂ ಸಹ ಪರಿಹಾರ ಮೊತ್ತವನ್ನು ಪಾವತಿ ಮಾಡಿರುವುದು ಮತ್ತು ಪರಿಹಾರ ಮೊತ್ತವನ್ನು ಪಾವತಿಸುವಲ್ಲಿ ಕಾನೂನು ಬದ್ದ ಭೂ ಮಾಲೀಕರಿಗೆ ಪಾವತಿಸದೇ ಇರುವಂತಹ ಗುರುತರ ಲೋಪಗಳು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ.

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇಲ್ಲಿ ಈ ಹಿಂದೆ ಶ್ರೀ ಮುನಿನಾರಾಯಣಪ್ಪ, ವಿಶೇಷ ಭೂ ಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದು (ನಂತರ ಸ್ವಯಂನಿವೃತ್ತಿ ಹೊಂದಿದ), ಶ್ರೀ ಜಿ. ಸಿ. ಅನಿಲ್ ಕುಮಾರ್ ಕೆಎಎಸ್ (ಹಿರಿಯ ಶ್ರೇಣಿ) ಇವರು ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಕೆ. ಬಿ. ಚಿಕ್ಕಬೆಟ್ಟಯ್ಯ, ಕೆಎಎಸ್ (ಕಿರಿಯ ಶ್ರೇಣಿ), ಇವರು ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಹೆಚ್. ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ) ಮತ್ತು ಶ್ರೀ ಎನ್. ಆರ್. ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ (ಪ್ರಸ್ತುತ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಅಮಾನತ್ತಿನಲ್ಲಿರುವ) ರವರುಗಳು ಈ ಹಗರಣದಲ್ಲಿ ಭಾಗಿಯಾಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಯಡಿ ದುರ್ನಡತೆ ಎಸಗಿ ಸರ್ಕಾರಕ್ಕೆ ಅಪಾರ ಪ್ರಮಾಣದ ಆರ್ಥಿಕ ನಷ್ಟ ಉಂಟುಮಾಡಿರುವ ವರ್ತನೆಯು ಸರ್ಕಾರದ ಗನಮಕ್ಕೆ ಬಂದಿರುವುದರಿಂದ, ಸರ್ಕಾರವು ಸನ್ನಿವೇಶವನ್ನು ಕೂಲಂಕಶವಾಗಿ ಅವಲೋಕಿಸಿ, ಪ್ರಕರಣದ ಗಂಭೀರತೆಯ ಹಿನ್ನೆಲೆಯಲ್ಲಿ ಶ್ರೀ ನಾಗರಾಜು ರವರು ಈಗಾಗಲೇ ಅಮನತ್ತಿನಲ್ಲಿರುವುದನ್ನು ಹಾಗೂ ಶ್ರೀ

ಮುನಿನಾರಾಯಣಪ್ಪ ರವರು ಸ್ವಇಚ್ಛಾ ನಿವೃತ್ತಿ ಹೊಂದಿರುವುದನ್ನು ಗಮನಿಸಿ, ಇನ್ನಿತರೆಯವರನ್ನು ಸರ್ಕಾರಿ ಹುದ್ದೆಯಲ್ಲಿಯೇ ಮುಂದುರಿಸಿದಲ್ಲಿ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ, ತಿರುಚುವ ಮತ್ತು ಸಾಕ್ಷಿಗಳ ಮೇಲೆ ವ್ಯತಿರಿಕ್ತ ಪ್ರಭಾವ ಬೀರುವ ಸಾಧ್ಯತೆಗಳು ಇರುವುದರಿಂದ ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 043 ಕೆಇವಿ 2010. ಬೆಂಗಳೂರು, ದಿನಾಂಕ: 25–09–10**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಮತ್ತು ಸನ್ನಿವೇಶವನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಈ ಕೆಳಕಂಡ ಕೆಎಎಸ್ ಅಧಿಕಾರಿಗಳಾದ

1. ಶ್ರೀ ಜಿ. ಸಿ. ಅನಿಲ್‌ಕುಮಾರ್ ಕೆಎಎಸ್ (ಹಿರಿಯ ಶ್ರೇಣಿ), ಪ್ರಸ್ತುತ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಪೂರ್ವ, ಬೆಂಗಳೂರು.
2. ಶ್ರೀ ಕೆ. ಬಿ. ಚಿಕ್ಕಬೆಟ್ಟಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಪ್ರಸ್ತುತ ನಿಯೋಜನೆ ಮೇಲೆ ಸಹಾಯಕ ಆಯುಕ್ತರು, ಗ್ಯಾಸ್ ಅಥಾರಿಟಿ ಆಫ್ ಇಂಡಿಯಾ ಲಿಮಿಟೆಡ್, ಬೆಂಗಳೂರು ಮತ್ತು
3. ಶ್ರೀ ಹೆಚ್. ಎಸ್. ರಾಮಕೃಷ್ಣ ಕೆಎಎಸ್ (ಕಿರಿಯ ಶ್ರೇಣಿ) ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು.

ಇವರುಗಳು ಸದರಿ ಹುದ್ದೆಯಲ್ಲಿಯೇ ಮುಂದುವರಿದಲ್ಲಿ, ಸಾಕ್ಷ್ಯಾಧಾರಗಳನ್ನು ನಾಶಪಡಿಸುವ, ತಿರುಚುವ ಮತ್ತು ಸಾಕ್ಷಿಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವ ಸಾಧ್ಯತೆ ಇರುವುದರಿಂದ, ಸುಗಮ ತನಿಖೆಯ ದೃಷ್ಟಿಯಿಂದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10 (1)(d)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲ್ಕಂಡ ಮೂರು ಅಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಕರ್ನಾಟಕ ಲೋಕಾಯುಕ್ತ ಸಂಸ್ಥೆಯಿಂದ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆ / ತನಿಖಾ ವರದಿ ಬಂದ ನಂತರ, ಈ ಅಮಾನತ್ತಿನ ಆದೇಶವನ್ನು ಪುನರ್ ಪರಿಶೀಲಿಸಲಾಗುವುದು.

ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2489 ಸಿಆಸುಇ (ಸೇವೆಗಳು–2)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ರಾಯಾಪುರ, ಧಾರವಾಡ ಜಿಲ್ಲೆ, ಇವರ ವಿರುದ್ಧ ಶಿಸ್ತು ಪ್ರಕರಣ– ಸೇವೆಯಿಂದ ವಜಾಗೊಳಿಸಿ ಇವರಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ.40,23,153/–ಗಳ ವಸೂಲಾತಿ ಬಗ್ಗೆ.

**ಓದಲಾಗಿದೆ :**

1. ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೀಡಿದ ತಿಳುವಳಿಕೆ ಪತ್ರ ಹಾಗೂ ಆರೋಪ ಪಟ್ಟಿ ಸಂ: ಸಿಬ್ಬಂದಿ:3ಎ/ಶಿಸ್ತು/5/2005–06 ದಿ: 06.06.2006
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿಬ್ಬಂದಿ3/ಎ/ಶಿಸ್ತು/5/2005–06 ದಿ:12.01.2007.
3. ಶ್ರೀ ಡಿ.ವಿ.ಶೇಟ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಧಾರವಾಡ–ಇವರು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 31.03.2008.
4. ಶ್ರೀ ಎಸ್.ವಿ.ಕವಲೂರ ಇವರಿಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೀಡಿದ ತಿಳುವಳಿಕೆ ಪತ್ರ ಸಂ: ಸಿಬ್ಬಂದಿ:3ಎ/ಶಿಸ್ತು/5/2005–06 ದಿನಾಂಕ: 22.04.2008.
5. ಶ್ರೀ ಎಸ್.ವಿ.ಕವಲೂರ ರೇಷ್ಮೆ ಸಹಾಯಕ ನಿರ್ದೇಶಕರು ಇವರು ದಿನಾಂಕ: 14.07.2008ರಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಸಲ್ಲಿಸಿದ ಮನವಿ.
6. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂ:ಸಿಬ್ಬಂದಿ/3/ಎ/ಶಿಸ್ತು/5/2005–06 ದಿನಾಂಕ: 17.12.2008.
7. ಕಾರ್ಯದರ್ಶಿಯವರು, ಕರ್ನಾಟಕ ಲೋಕಸೇವಾ ಆಯೋಗ ಇವರಿಗೆ ಬರೆದ ಸರ್ಕಾರದ ಪತ್ರ ಸಂ:ವಾಕೈ 12 ರೇಸೇವಿ 2008 ದಿನಾಂಕ: 13.08.2009.
8. ಕಾರ್ಯದರ್ಶಿಯವರು, ಕರ್ನಾಟಕ ಲೋಕಸೇವಾ ಆಯೋಗ, ಇವರ ಪತ್ರ ಸಂ:ಪಿಎಸ್‌ಸಿ 108 ಸಿಎನ್‌ಎಸ್ 09 ದಿನಾಂಕ: 01.12.2009.

**ಪ್ರಸ್ತಾವನೆ :**

ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ಇವರು ದಿನಾಂಕ: 01.01.1997 ರಿಂದ 26.10.2004ರ ಅವಧಿಯಲ್ಲಿ ರೇಷ್ಮೆ ಬಿತ್ತನೆ ಕೋಠಿ, ರಾಯಾಪುರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಧಿಕಾರ ದುರುಪಯೋಗಪಡಿಸಿಕೊಂಡು ಬೃಹತ್ ಮೊತ್ತದ ಸರ್ಕಾರದ ಹಣ ನಷ್ಟವಾಗಲು ಕಾರಣರಾದ ಆರೋಪಗಳ ಮೇರೆಗೆ ಕರ್ನಾಟಕ ನಾಗರೀಕ ಸೇವಾ (ಸಿಸಿ&ಎ) ನಿಯಮ 11ರಡಿಯಲ್ಲಿ ಈ ಬಗ್ಗೆ ತಿಳುವಳಿಕೆ ಪತ್ರದೊಂದಿಗೆ ಈ

ಕೆಳಕಂಡಂತೆ ಆರೋಪ ಪಟ್ಟಿಯನ್ನು ಮೇಲೆ ಓದಲಾದ ಉಲ್ಲೇಖ (1)ರಲ್ಲಿ ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು ಇವರಿಗೆ ರೇಷ್ಮೆ ಆಯುಕ್ತರು ಜಾರಿಗೊಳಿಸಿರುತ್ತಾರೆ.

a) ಇವರು ರಾಯಪುರದಲ್ಲಿನ ರೇಷ್ಮೆ ಬಿತ್ತನೆ ಕೋಠಿಯಲ್ಲಿ ದಿನಾಂಕ: 01.01.1997 ರಿಂದ 26.10.2004ರವರೆಗೆ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದ್ವಿತಳಿ, ಸಿ.ಎಸ್.ಆರ್ ತಳಿ ಹಾಗೂ ಮೈಸೂರು ತಳಿ ಗೂಡುಗಳ ಚಿಟ್ಟೆ ಕೊರೆದ ಗೂಡಿನ ದಾಸ್ತಾನಿನಲ್ಲಿ ಕಡಿಮೆ ವಿಲೇವಾರಿ ಮಾಡಿ ಸರ್ಕಾರಕ್ಕೆ ಒಟ್ಟು ರೂ.3,90,795/–ಗಳ ನಷ್ಟ ಉಂಟು ಮಾಡಿರುವುದು.

b) ಮಿಶ್ರತಳಿ, ವಿದೇಶ ತಳಿ ಮತ್ತು ಸಿ.ಎಸ್.ಆರ್ ಮೊಟ್ಟೆ ತಳಿಗಳನ್ನು ಮಾರಾಟ ಮಾಡಿದ ಮೌಲ್ಯ ರೂ.8,34,214/–ಗಳಿಗೆ ರಶೀದಿ ಹಾಕಿಯೂ ಸಹ ಮೊತ್ತವನ್ನು ಸರ್ಕಾರಕ್ಕೆ ಇರಸಾಲು ಮಾಡದೆ ದುರುಪಯೋಗಪಡಿಸಿಕೊಂಡಿರುವುದು.

c) ಮೈಸೂರು ತಳಿ, ಸಿ.ಎಸ್.ಆರ್ ತಳಿ ಮತ್ತು ವಿದೇಶ ತಳಿ ಗೂಡಿನ ದಾಸ್ತಾನಿನಲ್ಲಿ ಸರಬರಾಜಾದ ಒಳ್ಳೆಯ ಗೂಡಿನಲ್ಲಿ ರೂ.7,75,244/– ಗಳ ಮೌಲ್ಯದ ಗೂಡುಗಳನ್ನು ಕರಗಿದ ಗೂಡುಗಳೆಂದು ನಮೂದಿಸಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದು.

d) ಮಿಶ್ರತಳಿ, ಸಿ.ಎಸ್.ಆರ್ ಮತ್ತು ದ್ವಿತಳಿ ಮೊಟ್ಟೆ ತಯಾರಿಕೆಯಲ್ಲಿ ಕಡಿಮೆ ಇಳುವರಿ ಉಂಟಾಗಿ ಸರ್ಕಾರಕ್ಕೆ ರೂ.6,80,889.50ಗಳ ನಷ್ಟ ಉಂಟು ಮಾಡಿರುವುದಲ್ಲದೆ ಸಕಾಲದಲ್ಲಿ ಕಡಿಮೆ ಇಳುವರಿ ಸಂಬಂಧ ಕ್ಷಮಾಪಣೆ ಪ್ರಸ್ತಾವನೆಯನ್ನು ಮೇಲಧಿಕಾರಿಗಳಿಗೆ ಸಲ್ಲಿಸುವಲ್ಲಿ ವಿಫಲರಾಗಿರುವುದು.

e) ಬೇಡಿಕೆ ಇಲ್ಲದೆ ಜಾಕಿಯಾದಂತಹ ಮಿಶ್ರತಳಿ, ದ್ವಿತಳಿ ಸಿ.ಎಸ್.ಆರ್ ತಳಿಗಳ ಒಟ್ಟು ರೂ.19,11,743 ಮೊಟ್ಟೆಗಳನ್ನು ನಾಶಪಡಿಸಿ ಸರ್ಕಾರಕ್ಕೆ ರೂ.29,86,031/–ಗಳ ನಷ್ಟ ಉಂಟು ಮಾಡಿರುವುದು.

f) ಮೇಲಧಿಕಾರಿಗಳಿಂದ ಅನುಮತಿ ಮತ್ತು ಡಿಸಿ ಬಿಲ್ಲುಗಳಿಗೆ ಮೇಲುರುಜು ಪಡೆಯದೆ ಹೆಚ್ಚುವರಿಯಾಗಿ ಕೆಲಸಗಾರರನ್ನು ನಿಯೋಜಿಸಿಕೊಂಡು ರೂ.4,70,416/–ಗಳನ್ನು ಡ್ರಾ ಮಾಡಿ ಪಾವತಿಸುವ ಮೂಲಕ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.

g) ಸರಬರಾಜಾದ ಗೂಡಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಗೂಡನ್ನು ನಮೂದಿಸಿ ಮೊಟ್ಟೆ ತಯಾರಿಸಲು ಹೆಚ್ಚಾಗಿ ಉಪಯೋಗಿಸಿಕೊಂಡಿರುವ ಮೊಟ್ಟೆ ಹಾಳೆಗಳ ಮೌಲ್ಯ ರೂ.4,890/–ಗಳನ್ನು ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದು.

h) ದಿನಾಂಕ: 22.09.2003 ರಿಂದ 16.12.2003ರ ಅವಧಿಯಲ್ಲಿ ಮಿಶ್ರತಳಿ ಮಾರಾಟ ಮಾಡಿದ ಹಣ ರೂ.53,259/–ಗಳನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿರುವುದು.

ಆರೋಪಿತ ಅಧಿಕಾರಿಯು ಆರೋಪ ಪಟ್ಟಿಯನ್ನು ಸ್ವೀಕರಿಸಿ ಅವರ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ ಹಿನ್ನೆಲೆಯಲ್ಲಿ ಸದರಿ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಹಿಡಿಯುವ ಸಲುವಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಡಿ ಶ್ರೀ ಡಿ.ವಿ.ಶೇಟ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶ್ರೀ ಬಿ.ಆರ್.ಹಾರುಗೊಪ್ಪ, ರೇಷ್ಮೆ ಉಪ ನಿರ್ದೇಶಕರು, ಇವರನ್ನು ಮಂಡನಾಧಿಕಾರಿಯಾಗಿ ಮೇಲೆ ಓದಲಾದ ಉಲ್ಲೇಖ (2)ರ ಆದೇಶದ ಮೂಲಕ ನೇಮಕ ಮಾಡಲಾಯಿತು, ವಿಚಾರಣೆಯ ನಂತರ ಮೇಲೆ ಓದಲಾದ ಉಲ್ಲೇಖ (3)ರ ದಿನಾಂಕ: 31.03.2008ರ ಮೂಲಕ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿ ಮೇಲ್ಕಾಣಿಸಿದ ಎಂಟು ಆರೋಪಗಳ ಪೈಕಿ ಕ್ರಮ ಸಂಖ್ಯೆ (g)ನ್ನು ಹೊರತುಪಡಿಸಿ ಉಳಿದ ಎಲ್ಲಾ ಆರೋಪಗಳು ರುಜುವಾತಾಗಿರುವುದಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ವರದಿ ಮಾಡಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (4)ರ ದಿನಾಂಕ: 22.04.2008ರ ತಿಳುವಳಿಕೆ ಪತ್ರದ ಮೂಲಕ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಯಾದ ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಜಾರಿಗೊಳಿಸಿ ವಿಚಾರಣಾಧಿಕಾರಿಯವರ ನಿರ್ಣಯದ ಬಗ್ಗೆ ಲಿಖಿತ ಹೇಳಿಕೆ ನೀಡುವಂತೆ ಸೂಚಿಸಲಾಗಿದ್ದಿತು. ಇದಕ್ಕೆ ಪ್ರತಿಕ್ರಿಯೆಯಾಗಿ ಮೇಲೆ ಓದಲಾದ ಉಲ್ಲೇಖ (5)ರ ಪತ್ರದಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ವಿಚಾರಣಾಧಿಕಾರಿಯವರ ನಿರ್ಣಯವನ್ನು ನಿರಾಕರಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (6)ರ ಪತ್ರದ ಮೂಲಕ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ವಿಚಾರಣಾಧಿಕಾರಿಯವರ ನಿರ್ಣಯ, ಸಾಕ್ಷಿಗಳ ಹೇಳಿಕೆ ಹಾಗೂ ಪ್ರಕರಣಗಳಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆಯೆಂದು, ಆರೋಪಿತ ಅಧಿಕಾರಿಯಾದ ಶ್ರೀ ಎಸ್.ವಿ.ಕವಲೂರರವರ ವಿರುದ್ಧ ಮಾಡಲಾದ 8 ಆರೋಪಗಳ ಪೈಕಿ ಕ್ರಮಸಂಖ್ಯೆ (g)ನ್ನು ಹೊರತುಪಡಿಸಿ ಉಳಿದ ಎಲ್ಲಾ ಆರೋಪಗಳು ಸಾಬೀತಾಗಿರುತ್ತವೆಂದು, ಇದರಲ್ಲಿ ದ್ವಿತಳಿ ಮಿಶ್ರತಳಿ, ಸಿ.ಎಸ್.ಆರ್ ತಳಿ ತಯಾರಿಕೆಯಲ್ಲಿ ಕಡಿಮೆ ಇಳುವರಿ ಬಾಬ್ತು ರೂ.6,80,889.50ಗಳ ಪೈಕಿ ರೂ.6,28,171.15ಗಳಿಗೆ ಕ್ಷಮಾಪಣಾ ಆದೇಶ ಮತ್ತು ಬೇಡಿಕೆ ಇಲ್ಲದೆ ಜಾಕಿಯಾದ ಮಿಶ್ರ, ದ್ವಿತಳಿ, ಸಿ.ಎಸ್.ಆರ್ ತಳಿ ಬಾಬ್ತು ರೂ.29,86,031/–ಗಳ ಪೈಕಿ ರೂ.14.85,904.90ಗಳಿಗೆ ಮನ್ನಾ ಆದೇಶ ನೀಡಿರುವುದನ್ನು ಕಳೆದು ರೂ.40,76,772/–ಗಳನ್ನು ಆರೋಪಿತ ಅಧಿಕಾರಿಯಿಂದ ವಸೂಲಿ ಮಾಡಿ, ಸರ್ಕಾರಕ್ಕೆ ಜಮಾ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ ಶ್ರೀ ಎಸ್.ವಿ ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರಿಂದ ಸರ್ಕಾರಕ್ಕೆ ಬೃಹತ್ ಪ್ರಮಾಣದ ಆರ್ಥಿಕ ನಷ್ಟ ಉಂಟಾಗಿರುವುದಲ್ಲದೆ, ಅವರಿಗೆ ವಹಿಸಿದ್ದ ಕರ್ತವ್ಯದಲ್ಲಿ ಲೋಪವೆಸಗಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಸ್ಪಷ್ಟವಾಗಿದೆ ಎಂದು ತಿಳಿಸಿ, ಆರೋಪಿತ ಅಧಿಕಾರಿಯು "ಬಿ" ವೃಂದದ ಅಧಿಕಾರಿಯಾಗಿರುವುದರಿಂದ ಇವರಿಗೆ ಸರ್ಕಾರವೇ ನೇಮಕಾತಿ ಪ್ರಾಧಿಕಾರವಾಗಿರುವ ಕಾರಣ ಸದರಿ ಅಧಿಕಾರಿಯಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ವಸೂಲಿ ಮಾಡುವುದರೊಂದಿಗೆ ಸೂಕ್ತ ದಂಡನೆಯನ್ನು ವಿಧಿಸುವುದು ಸಮಂಜಸವೆಂದು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮ 1957ರ ನಿಯಮ 8ರನ್ವಯ ಸೂಕ್ತ ಆದೇಶವನ್ನು ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಆರೋಪಿತ ಅಧಿಕಾರಿಯು "ಬಿ" ವೃಂದದ ಅಧಿಕಾರಿಯಾಗಿರುವುದರಿಂದ ಇವರಿಗೆ ದಂಡನೆ ವಿಧಿಸುವ ವಿಷಯದಲ್ಲಿ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯ ಆಧಾರದ ಮೇಲೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಶಿಫಾರಸ್ಸಿನಂತೆ KPSC (Consultation) Regulations 2000 ರಡಿಯಲ್ಲಿ ಮೇಲೆ ಓದಲಾದ ಉಲ್ಲೇಖ (7)ರ ಪತ್ರದ ಮೂಲಕ ಕರ್ನಾಟಕ ಲೋಕಸೇವಾ ಆಯೋಗದ ಸಹಮತ ಕೋರಿದ್ದು, ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಓದಲಾದ ಉಲ್ಲೇಖ (8)ರಲ್ಲಿ ಸರ್ಕಾರಕ್ಕೆ ಪತ್ರ ಬರೆದು ಆಪಾದಿತ ಅಧಿಕಾರಿಯನ್ನು ಸೇವೆಯಿಂದ ವಜಾಗೊಳಿಸಿ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಬಡ್ಡಿ ಸಮೇತ ವಸೂಲು ಮಾಡುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತವನ್ನು ನೀಡಿರುತ್ತದೆ.

ಮೇಲ್ಕಾಣಿಸಿದ ಖಂಡಿಕೆಗಳಲ್ಲಿ ವಿವರಿಸಿರುವನ್ವಯ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಶಿಫಾರಸ್ಸಿನಂತೆ ಶ್ರೀ ಎಸ್.ವಿ.ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ, 8ರ ಉಪ ನಿಯಮ (viii) ರನ್ವಯ ಸರ್ಕಾರಿ ಸೇವೆಯಿಂದ ವಜಾಗೊಳಿಸಿ, ಇವರಿಂದ ಅಂತಿಮವಾಗಿ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ.40,23,153/– (ರೂ.ನಲವತ್ತು ಲಕ್ಷದ ಇಪ್ಪತ್ಮೂರು ಸಾವಿರದ ನೂರಾ ಐವತ್ಮೂರು)ಗಳನ್ನು ಶೇ.8ರ ಬಡ್ಡಿ ಸಮೇತ ವಸೂಲಿ ಮಾಡಲು ನ್ಯಾಯಾಲಯದಲ್ಲಿ ದಾವೆ ಹೂಡುವ ಸಲುವಾಗಿ ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 12 ರೇಸೇವಿ 2009 ಬೆಂಗಳೂರು ದಿನಾಂಕ: 25.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ವಿ. ಕವಲೂರ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ, 8ರ ಉಪ ನಿಯಮ (viii) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ. ವಜಾಗೊಂಡ ಈ ಅಧಿಕಾರಿಯಿಂದ ಸರ್ಕಾರಕ್ಕೆ ಅಂತಿಮವಾಗಿ ಉಂಟಾಗಿರುವ ನಷ್ಟದ ಹಣ ರೂ.40,23,153/– (ರೂ.ನಲವತ್ತು ಲಕ್ಷದ ಇಪ್ಪತ್ಮೂರು ಸಾವಿರದ ನೂರಾ ಐವತ್ಮೂರು)ಗಳನ್ನು ಶೇ.8ರ ಬಡ್ಡಿ ಸಮೇತ ವಸೂಲಿ ಮಾಡಲು ಸಕ್ಷಮ ನ್ಯಾಯಾಲಯದಲ್ಲಿ ದಾವೆ ಹೂಡಲು ಸರ್ಕಾರವು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಆದೇಶಿಸಿದೆ. ಸದರಿ ಅಧಿಕಾರಿಯವರು ವಸೂಲಾತಿಗೆ ಕೂಡಲೇ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ದೇವಿಕ**

ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2490

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೊಳ್ಳೇಗಾಲ ಶಾಖೆಗೆ ಉಪಯೋಗಿಸುತ್ತಿರುವ ಕಟ್ಟಡದ ದಿ:1–4–2004 ರಿಂದ 31–3–2007 ರವರೆಗೆ ರೇಷ್ಮೆ ಇಲಾಖೆಗೆ ಪಾವತಿಸಬೇಕಾಗಿರುವ ಬಾಡಿಗೆ ಬಾಬ್ತು ರೂ.2,74,500/–ಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಬೆರೆವಿಕೆ/ಆಡಿಟ್/ಕೋರೆವಿಕೆ/ಎಜಿ/1/05–06, ದಿನಾಂಕ: 20–3–2009 ಹಾಗೂ 6–5–2010.

**ಪ್ರಸ್ತಾವನೆ:**

ಮೇಲೆ ಓದಲಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೊಳ್ಳೇಗಾಲದಲ್ಲಿ ತನ್ನ ಕಾರ್ಯಚಟುವಟಿಕೆಗಾಗಿ ರೇಷ್ಮೆ ಇಲಾಖೆಯ ಕಟ್ಟಡದಲ್ಲಿ ಜಾಗವನ್ನು ಪಡೆದಿದ್ದು, ಸದರಿ ಜಾಗಕ್ಕೆ ಮಂಡಳಿಯು ಬಾಡಿಗೆಯನ್ನು ಪಾವತಿಸಿರುವುದಿಲ್ಲವೆಂದು ಮಹಾಲೇಖಪಾಲರು ಲೆಕ್ಕಪರಿಶೋಧನಾ ವರದಿಯಲ್ಲಿ ಆಕ್ಷೇಪಿಸಿರುವುದಾಗಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ದಿನಾಂಕ: 1–4–2004 ರಿಂದ 31–3–2007 ರವರೆಗೆ ಬಾಡಿಗೆ ಬಾಬ್ತು ರೂ2,74,500/–ಗಳನ್ನು ಪಾವತಿಸಬೇಕಾಗಿದೆಯೆಂದು ಆದರೆ, ಹಲವಾರು ಕಾರಣಗಳಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಕಾರ್ಯಚಟುವಟಿಕೆಗಳು ನಷ್ಟದಲ್ಲಿ ನಡೆಯುತ್ತಿದ್ದು, ಅದು ತನ್ನ ನೌಕರರ ವೇತನ ಹಾಗೂ ಇತರೆ ವೆಚ್ಚಗಳನ್ನು ನಿಭಾಯಿಸುವುದು ಕಷ್ಟವಾಗಿದೆಯಾದ್ದರಿಂದ ಮಂಡಳಿಯ ಪ್ರಸಕ್ತ ಹಣಕಾಸಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಬಾಡಿಗೆ ಬಾಬ್ತನ್ನು ಮನ್ನಾ ಮಾಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು, ಕೋರಿರುವುದಾಗಿ ತಿಳಿಸಿ, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ರೇಷ್ಮೆ ವಿನಿಮಯ ಕೇಂದ್ರದಲ್ಲಿ ಪಡೆದಿರುವ ಕಟ್ಟಡದ ಬಾಡಿಗೆ ಮೊತ್ತವನ್ನು ಸರ್ಕಾರವು ಈಗಾಗಲೇ ಮನ್ನಾ ಮಾಡಿರುವಂತೆ ಕೊಳ್ಳೇಗಾಲದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಪಡೆದಿರುವ ಕಟ್ಟಡದ ಬಾಡಿಗೆ ಮೊತ್ತ ರೂ.2,74,500/–ಗಳನ್ನು ಹಾಗೂ ಮುಂದಿನ ದಿನಗಳಲ್ಲಿ ಪಾವತಿಸಬೇಕಾಗಿರುವ ಬಾಡಿಗೆಯನ್ನು ಮನ್ನಾ ಮಾಡಿ ಆದೇಶ ಹೊರಡಿಸಿದಲ್ಲಿ ಮಹಾಲೇಖಪಾಲರ ಆಕ್ಷೇಪಣಾ ಕಂಡಿಕೆಗಳಿಗೆ ಉತ್ತರಿಸಬಹುದಾಗಿದೆಯಾದ್ದರಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ಇಲಾಖೆಗೆ ಪಾವತಿಸಬೇಕಾಗಿರುವ ಬಾಡಿಗೆ ಮೊತ್ತ ರೂ.2,74,500/–ಗಳನ್ನು ಮನ್ನಾ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಪ್ರಸ್ತುತ ನಷ್ಟದಲ್ಲಿ ನಡೆಯುತ್ತಿದ್ದು, ಅದು ಈಗಿನ ಪರಿಸ್ಥಿತಿಯಲ್ಲಿ ಬಾಡಿಗೆ ಮೊತ್ತವನ್ನು ಪಾವತಿಸುವ ಸ್ಥಿತಿಯಲ್ಲಿ ಇರುವುದಿಲ್ಲವಾದ್ದರಿಂದ ಮಂಡಳಿಯ ಪ್ರಸ್ತುತ ಹಣಕಾಸಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಬಾಡಿಗೆ ಮೊತ್ತವನ್ನು ಮನ್ನಾ ಮಾಡುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 11 ರೇಉನಿ 2009, ಬೆಂಗಳೂರು, ದಿನಾಂಕ: 23–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ದಿನಾಂಕ: 1–4–2004 ರಿಂದ 31–3–2007 ರವರೆಗೆ ರೇಷ್ಮೆ ಇಲಾಖೆಗೆ ಪಾವತಿಸಬೇಕಾಗಿರುವ ಕೊಳ್ಳೇಗಾಲದ ರೇಷ್ಮೆ ಇಲಾಖೆಯ ಕಟ್ಟಡದ ಬಾಡಿಗೆ ಬಾಬ್ತು ರೂ.2,74,500/–ಗಳನ್ನು (ಎರಡು ಲಕ್ಷದ ಎಪ್ಪತ್ನಾಲ್ಕು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಮನ್ನಾ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD/1171/Exp-1/2010, ದಿನಾಂಕ: 15–7–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ಪಿ.ಆರ್. 2491 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಸಲುವಾಗಿ ಬಳ್ಳಾರಿ ಜಿಲ್ಲೆ, ಹೂವಿನಹಡಗಲಿ ತಾಲ್ಲೂಕಿನ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯ ಕೆರೆಗಳನ್ನು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರ ಅ.ಸ. ಪತ್ರ ಸಂ: ಜಸಂಇ 71 ಎಂಟಿಪಿ 2008 ದಿನಾಂಕ: 25.09.2010

**ಪ್ರಸ್ತಾವನೆ :**

ಜಲಸಂಪನ್ಮೂಲ ಇಲಾಖೆಯು ಮೇಲೆ ಓದಲಾದ ದಿನಾಂಕ: 25.09.2010ರ ಪತ್ರದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಜಲಸಂಪನ್ಮೂಲ ಇಲಾಖೆಯು ತುಂಗಭದ್ರಾ ನದಿಗೆ ನಿರ್ಮಿಸಿರುವ ಸಿಂಗಟಲೂರು ಏತ ನೀರಾವರಿ ಯೋಜನೆಯಿಂದ ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕಿನ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯ ಈ ಕೆಳಕಂಡ 10 ಕೆರೆಗಳಿಗೆ ತುಂಗಭದ್ರಾ ನದಿಯಿಂದ ನೀರು ತುಂಬಿಸಲು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸುವಂತೆ ಕೋರಿರುತ್ತಾರೆ.

1. ಅರಳಿಹಳ್ಳಿ ಕೆರೆ 2. ಹಿರೇಹಡಗಲಿ ಕೆರೆ 3. ಹಗರನೂರು ಕೆರೆ 4. ದೇವಗೊಂಡನಹಳ್ಳಿ ಕೆರೆ 5. ಮುದೇನೂರು ಕೆರೆ 6. ತಲಕಲ್ಲು ಕೆರೆ 7. ಹಿರೇಮಲ್ಲನಕೆರೆ 8. ಮಲಿಯಮ್ಮನಕೆರೆ 9. ದಾಸನಹಳ್ಳಿ ಕೆರೆ ಮತ್ತು 10. ಬನ್ನಿಕಲ್ಲು ಕೆರೆ

ಮೇಲ್ಕಂಡ ಕೆರೆಗಳಲ್ಲಿ ಮುದೇನೂರು ಕೆರೆ, ಹಿರೇಮಲ್ಲನಕೆರೆ ಮತ್ತು ಮಲಿಯಮ್ಮನಕೆರೆ ಇವು ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿರುವುದಿಲ್ಲ. ಆದ್ದರಿಂದ ಈ ಕೆರೆಗಳನ್ನು ಹೊರತುಪಡಿಸಿ, ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಉಳಿದ 07 ಕೆರೆಗಳನ್ನು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸಲು ನಿರ್ಧರಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 54 ಕೆಜಿದು 2010. ಬೆಂಗಳೂರು, ದಿನಾಂಕ: 25.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಸಲುವಾಗಿ ಬಳ್ಳಾರಿ ಜಿಲ್ಲೆ, ಹೂವಿನಹಡಗಲಿ ತಾಲ್ಲೂಕಿನ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿರುವ 07 ಕೆರೆಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸಲು ಆದೇಶಿಸಿದೆ:

1. ಅರಳಿಹಳ್ಳಿ ಕೆರೆ
2. ಹಿರೇಹಡಗಲಿ ಕೆರೆ
3. ಹಗರನೂರು ಕೆರೆ
4. ದೇವಗೊಂಡನಹಳ್ಳಿ ಕೆರೆ
5. ತಲಕಲ್ಲು ಕೆರೆ
6. ದಾಸನಹಳ್ಳಿ ಕೆರೆ ಮತ್ತು
7. ಬನ್ನಿಕಲ್ಲು ಕೆರೆ

1. ಕೆರೆಗೆ ನೀರು ತುಂಬಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಯಾವುದೇ ಧಕ್ಕೆಯಾಗದಂತೆ ನೋಡಿಕೊಳ್ಳತಕ್ಕದ್ದು;
2. ಪ್ರಸ್ತುತ ಸಣ್ಣ ನೀರಾವರಿ ಇಲಾಖೆ ವತಿಯಿಂದ ಮೇಲ್ಕಂಡ ಕೆರೆಗಳನ್ನು ಯಾವುದೇ ಯೋಜನೆಯಡಿಯಲ್ಲಿ ಅಭಿವೃದ್ಧಿ ಕಾರ್ಯ ಪ್ರಾರಂಭಿಸಿದಲ್ಲಿ, ಅವುಗಳನ್ನು ಸಣ್ಣ ನೀರಾವರಿ ಇಲಾಖೆಯೇ ಪೂರ್ಣಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2492 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## WATER RESOURCES SECRETARIAT
## Corrigendum

**No. Saneeyi 236 Masavi 2009 (4) Dated: 25.09.2010.**

In the preamble of the Government Order No. SANEEYEE 236 MASAVI 2009 (4), dated: 16.09.2010, Under SI.No. (3) of the works list, the name of the taluk for the work, "Construction of New tank near Aidalli kaval village across K.G.halla" may be read as "Hassan" instead of "Belur". Other contents of the Government Order remain unchanged.

BY ORDER AND IN THE NAME OF GOVERNOR OF KARNATAKA

**RUDRAMURTHY**

Ex-officio Under Secretary to Government

P.R. 2493 Water Resources Department (Minor Irrigation)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಡಿ.ಜಿ.ಕುಲಕರ್ಣಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂ:ಲಾ 51 ಪಿಪಿಇ 80, ದಿನಾಂಕ: 02.04.1981,

2) ಸರ್ಕಾರದ ಅಧಿಸೂಚನೆ- II ಸಂ:ಲಾ 206 ಪಿಪಿಇ 87, ದಿನಾಂಕ: 23.06.1989,

3) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 20 ಪಿಪಿಇ 95, ದಿನಾಂಕ: 31.05.1995,

4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ: 14.08.2008,

5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ.1/98 (09)/ 2008-09, ದಿನಾಂಕ: 29.03.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 02.04.1981ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:15ರನ್ವಯ ಶ್ರೀ ಡಿ.ಜಿ.ಕುಲಕರ್ಣಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 05.04.1981 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:23.06.1989ರ ಸರ್ಕಾರದ ಅಧಿಸೂಚನೆ- IIರ ಕ್ರ.ಸಂ:11ರನ್ವಯ ಶ್ರೀ ಡಿ.ಜಿ.ಕುಲಕರ್ಣಿರವರು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 14.08.1989ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 31.05.1995ರ ಸರ್ಕಾರದ ಅಧಿಸೂಚನೆ ಕ್ರ.ಸಂ:11ರನ್ವಯ ಶ್ರೀ ಡಿ.ಜಿ.ಕುಲಕರ್ಣಿಯವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 03.07.1995 ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 29.03.2010ರ ಪತ್ರದಲ್ಲಿ, ಮೇಲೆ (1)ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಡಿ.ಜಿ. ಕುಲಕರ್ಣಿರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ಪ್ರಸ್ತುತ ರೂ. 18150-26925ರ ವೇತನ ಶ್ರೇಣಿಯ ಗ್ರೂಪ್-ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ: 03.07.1995ರ ಪೂರ್ವಾಹ್ನದಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಸದರಿಯವರು ಅವರ ಮುಂದಿನ ಹುದ್ದೆಯಾದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆಯಲು ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅರ್ಹರಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ ಹಾಗೂ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ (4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ಆಯ್ಕೆ ದರ್ಜೆ ವೇತನ ಶ್ರೇಣಿಗೆ ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ: 01.08.2008ಕ್ಕೆ ನಿಟಕಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 126 ಪಿಪಿಇ 2010, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಡಿ.ಜಿ.ಕುಲಕರ್ಣಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ (ವೇತನ ಶ್ರೇಣಿ ರೂ. 18150-26925) ದಿನಾಂಕ: 03.07.1995 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ರೂ. 19050-27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

ಪಿ.ಆರ್. 2494 (ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

## HOME SECRETARIAT

**Sub :** Revalidation of unutilized grants released under the Scheme for Modernization of State Police Forces (MPF Scheme)-reg.

**Read :** Director General and Inspector General of Police Bangalore letter No. ADGP/TTM/MDN/Rev/1/2010 dated:23/06/2010 & 9/9/2010.

**Preamble:**

The DG&IGP, Bangalore in his letter read above has stated that in GO No.HD 01 PFS 2010 dated 23/3/2010, sanction was accorded to the release of total unspent grant of ₹.13.56 crores released by Government of India under MPF Scheme for the year 2006-07, 2007-08 and 2008-09 for utilization as per approved plan during 2009-10 for the ongoing projects/committed items in pursuance of the Government of India letter No. 21011/65/09-PM-1 dated 08/03/2010 and out of the revalidated grants of Rs. 13.56 crores released on 23/03/2010, an amount of Rs. 11.96 crores was utilized and Rs.1.60 crores remained unspent as on 31/03/2010.

Further he has stated that in the year 2009-10, out of the total grants of Rs. 62.21 crores released by Government of India under MPF Scheme, an amount of Rs. 44,34,02,874-00 had been utilized and an amount of Rs. 17,86,97,126-00 remained unutilized as on 31/03/2010.

Therefore he has requested to release the total unspent grants of ₹.19.47 crores under the budget head "2055-00-115-0-00-125-Modernisation" for utilizing the same during 2010-11 for the approved ongoing projects/committed items.

After examining the matter the following orders are issued.

**Government Order No. HD 11 PFS 2010, Bangalore, Dated: 23/09/2010.**

In the circumstanaces stated in the preamble, sanction of Government is accorded for the utilization of unutilized funds of Rs. 19.47 crore (Rupees Nineteen crores & Forty seven lakhs only) during 2010-11, subject to the condition that the full Central Grants have been received and that the action plans as well as the procurement-processes are followed with approval of the competent authority.

The expenditure shall be met under the Head of Account "2055-00-115-0-00-125-Modernization" of the year 2010-11.

This issues with the concurrence of Finance Department vide its Note No. FD 219-Exp-11/10 dated: 21/08/2010.

By Order and in the name of the Governor of Karnataka,

**B.M.Lakshminarayana**

Under Secretary to Government,

Home Department (Police Expenditure)

P.R. 2495

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ ನಿರ್ದೇಶಕರನ್ನು ಇಲಾಖಾ ಮುಖ್ಯಸ್ಥರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್ 65 ಎಸ್‌ಇಡಬ್ಲ್ಯೂ 90 (ಭಾ) ದಿನಾಂಕ: 10–04–1991

2) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 187 ಎಸ್‌ಇಡಬ್ಲ್ಯೂ 92 (ಭಾ) ದಿನಾಂಕ: 17–08–1993

3) ಪತ್ರ ಸಂಖ್ಯೆ:ಅಂಸಂಸಂ:ಸಿಬ್ಬಂದಿ:ಸಿಆರ್–59/2009–10, ದಿನಾಂಕ: 08–12–2009.

**ಪ್ರಸ್ತಾವನೆ :**

ಡಾ॥ ಬಿ.ಆರ್.ಅಂಬೇಡ್ಕರ್‌ರವರ ಜನ್ಮ ಶತಾಬ್ಧಿ ಅಂಗವಾಗಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳ ಪರಿಸ್ಥಿತಿ ಮತ್ತು ಇತರೆ ಅಧ್ಯಯನ ನಡೆಸುವ ಸಲುವಾಗಿ ಬೆಂಗಳೂರಿನಲ್ಲಿ ಡಾ॥ ಬಿ.ಆರ್.ಅಂಬೇಡ್ಕರ್‌ರವರ ಹೆಸರಿನಲ್ಲಿ ಸಂಶೋಧನ ಕೇಂದ್ರ ಸ್ಥಾಪಿಸಲು (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ನಂತರ ಈ ಸಂಸ್ಥೆಗೆ ಜಂಟಿ ನಿರ್ದೇಶಕರ ವೃಂದದ ಹುದ್ದೆಯೊಂದಿಗೆ ಕೆಲವೊಂದು ಪೂರಕ ಸಿಬ್ಬಂದಿ ನೇಮಿಸಿಕೊಳ್ಳಲು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸೂಚಿಸಲಾಗಿತ್ತು. ಈ ಸಂಸ್ಥೆಗೆ ವಹಿಸಿರುವ ಕಾರ್ಯಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವ ಸಲುವಾಗಿ ನಿರ್ದೇಶಕರನ್ನು ಇಲಾಖಾ ಮುಖ್ಯಸ್ಥರೆಂದು ಘೋಷಿಸುವಂತೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ಡಾ॥ ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 76 ಪಕಸೇ 2010 ಬೆಂಗಳೂರು, ದಿನಾಂಕ: 16–09–2010**

ಡಾ॥ ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆಯ ನಿರ್ದೇಶಕರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ (1958) ನಿಯಮ 8(21)ರನ್ವಯ ಇಲಾಖಾ ಮುಖ್ಯಸ್ಥರೆಂದು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಘೋಷಿಸಲಾಗಿದೆ.

ಅ) ಉಲ್ಲೇಖಿತ ನಿಯಮಗಳ ಅನುಬಂಧ–1ಕ್ಕೆ ತಿದ್ದುಪಡಿ ತರಲು ಪ್ರಸ್ತಾವನೆ ಸಲ್ಲಿಸುವುದು.

ಆ) ತತ್ಸಂಬಂಧ ವಿತ್ತೀಯ ಅಧಿಕಾರಗಳನ್ನು ಚಲಾಯಿಸುವ ಸಲುವಾಗಿ ಆದೇಶ ಸಂಖ್ಯೆ:ಆಇ 2 ಖಿಈಕ 98 ದಿನಾಂಕ: 17–05–1999ಕ್ಕೆ ಸೇರ್ಪಡೆಗೊಳಿಸಲು ಸೂಕ್ತ ಪ್ರಸ್ತಾವನೆ ಸಲ್ಲಿಸುವುದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ 980 ಸೇ–3:10 ದಿನಾಂಕ: 12–07–2010 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ.ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 2496

## ವಸತಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂ:ವಇ/14/ಹೆಚ್‌ಎಎಸ್/2010, ದಿನಾಂಕ: 16.04.2010.

(2) ಸರ್ಕಾರದ ಅಪರ ಕಾರ್ಯದರ್ಶಿ ಹಾಗೂ ಪದನಿಮಿತ್ತ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಂಆಕಾ/3187/2010, ದಿನಾಂಕ: 23–09–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗುಲ್ಬರ್ಗಾ ನಗರ ಆಶ್ರಯ ಸಮಿತಿಗೆ ಸದಸ್ಯರನ್ನು ನೇಮಿಸಿ ನಿರ್ದೇಶಿಸಲ್ಪಟ್ಟಿರುವ ಅಧಿಕಾರೇತರ ಸದಸ್ಯರ ಸದಸ್ಯತ್ವವನ್ನು ರದ್ದು ಪಡಿಸಲು ಪ್ರಸ್ತಾಪಿಸಲಾಗಿದ್ದು, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ:ವಇ 215 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2010**

ಗುಲ್ಬರ್ಗಾ ನಗರ ಆಶ್ರಯ ಸಮಿತಿಯ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲ್ಪಟ್ಟ ಶ್ರೀ ವಿಜಯಕುಮಾರ ಎಸ್.ಕುಲಕರ್ಣಿ, ಎನ್.ಜಿ.ಓ. ಕಾಲೋನಿ, ಜೇವರ್ಗಿ ರಸ್ತೆ ಗುಲ್ಬರ್ಗಾ, ಶ್ರೀಮತಿ ದ್ಯಾವಮ್ಮ ತಳವಾರ, ಪಿ ಅಂಡ್ ಟಿ ಕಾಲೋನಿ, ಹಳೇ ಜೇವರ್ಗಿ ರಸ್ತೆ, ಗುಲ್ಬರ್ಗಾ, ಶ್ರೀ ಸಂತೋಷ್ ಕಮಲಾಪುರಕರ್, ರಾಮನಗರ , ಎಸ್.ಬಿ. ಕಾಲೇಜ್ ಹತ್ತಿರ, ಗುಲ್ಬರ್ಗಾ ಹಾಗೂ ಶ್ರೀ ವಿಲಿಯಮ್ಸ್, ತಾರಫೈಲ್ ನಗರ, ಗುಲ್ಬರ್ಗಾ ಇವರ ಗುಲ್ಬರ್ಗಾ ನಗರ ಆಶ್ರಯ ಸಮಿತಿಯಲ್ಲಿನ ಅಧಿಕಾರೇತರ ಸದಸ್ಯರ ಸದಸ್ಯತ್ವವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಆರ್.ವಲ್ಲೂರ**
ಪೀಠಾಧಿಕಾರಿ–2 ವಸತಿ ಇಲಾಖೆ.

ಪಿ.ಆರ್. 2497

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರು ಬೆಂಗಳೂರು ಮತ್ತು ಉಪನಿರ್ದೇಶಕರು, ಮಂಗಳೂರು ಇವರುಗಳಿಗೆ ಹಣ ಸೆಳೆಯುವ ಮತ್ತು ವೇತನ ಬಟವಾಡೆ ಮಾಡುವ ಅಧಿಕಾರವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ದಿನಾಂಕ: 30.03.2010ರಲ್ಲಿ ಕೊನೆಗೊಂಡ ಪತ್ರ ಸಂಖ್ಯೆ: ಡಿಎಎಂ:ಇಎಸ್‌ಟಿ:1:6ಕಸಂ:271:2009–10/279.

**ಪ್ರಸ್ತಾವನೆ :**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಧಾರವಾಡ ಮತ್ತು ಕಮಲಾಪುರದಲ್ಲಿನ (ಹಂಪಿ) ಉಪನಿರ್ದೇಶಕರಂತೆಯೇ ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇಲಾಖೆ ಉಪನಿರ್ದೇಶಕರಿಗೆ ಹಣ ಸೆಳೆಯುವ ಮತ್ತು ವೇತನ ಬಟವಾಡೆ ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸುವಂತೆ ಕೋರಿದ್ದರು. ತದನಂತರ ಉಪನಿರ್ದೇಶಕರು, ಮಂಗಳೂರು ಇವರಿಗೂ ಸಹ ಬಟವಾಡೆ ಅಧಿಕಾರವನ್ನು ಪ್ರತ್ಯಾಯೋಜಿಸಲು ಕೋರಿ ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 224 ಕೆಎಂಯು 2009, ಬೆಂಗಳೂರು, ದಿನಾಂಕ: 23.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಾಯಕ ನಿರ್ದೇಶಕರು, ಸರ್ಕಾರಿ ವಸ್ತು ಸಂಗ್ರಹಾಲಯ, ಬೆಂಗಳೂರು ಮತ್ತು ಕ್ಯೂರೇಟರ್ ಸರ್ಕಾರಿ ವಸ್ತು ಸಂಗ್ರಹಾಲಯ, ಮಂಗಳೂರು ಇವರಿಗೆ ನೀಡಲಾಗಿದ್ದ ಹಣ ಸೆಳೆಯುವ ಮತ್ತು ವೇತನ ಬಟವಾಡೆ ಮಾಡುವ ಅಧಿಕಾರವನ್ನು ಹಿಂಪಡೆದು ಅದರ ಬದಲಾಗಿ ಕ್ರಮವಾಗಿ ಸಂಬಂಧಿಸಿದ ಕಛೇರಿಗಳ ಉಪ ನಿರ್ದೇಶಕರುಗಳಿಗೆ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 17(ಸಿ), 49 ಮತ್ತು 50ರನ್ವಯ ಮಹಾಲೇಖಪಾಲರ ಪ್ರಾಧಿಕಾರ ಪಡೆಯುವ ಷರತ್ತಿಗೆ ಒಳಪಟ್ಟು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 432 ವೆಚ್ಚ–7/2010, ದಿನಾಂಕ: 06.08.2010 ರಲ್ಲಿ ಸಹಮತಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ.ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 2498

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಸೃಜಿಸಲಾಗಿರುವ ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 408 ಸಅಸೇ 2008 ದಿನಾಂಕ 6–9–2008.
2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 39 ಸಅಸೇ 2010 ದಿನಾಂಕ 15–6–2010.
3. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಕಂಇ 26 ಭೂಸ್ವಾವ್ಯಾ 2008, ದಿನಾಂಕ 9–6–2010 ಮತ್ತು ದಿನಾಂಕ 10–6–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ 3 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ 5–8–2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ 6–9–2008ರ ಆದೇಶದಲ್ಲಿ ಸೃಜಿಸಲಾದ 3 ಕಾನೂನು ಅಧಿಕಾರಿಗಳ ಹುದ್ದೆಗಳಲ್ಲಿ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ: 1–4–2010 ರಿಂದ 31–3–2011ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಕಂದಾಯ ಇಲಾಖೆಯಲ್ಲಿ ಕಾನೂನು ಕೋಶದಲ್ಲಿ ಹೆಚ್ಚುವರಿಯಾಗಿ ಸೃಜಿಸಲಾಗಿರುವ 1 ಕಾನೂನು ಅಧಿಕಾರಿಯ ಹುದ್ದೆಯನ್ನು ದಿನಾಂಕ 1–4–2010 ರಿಂದ 31–3–2011 ರ ವರೆಗೆ ಮುಂದುವರಿಸುವಂತೆ ಹಾಗೂ ಕಾನೂನು ಅಧಿಕಾರಿಗಳಿಗೆ ಮತ್ತು ಅವರ ಸಹಾಯಕ ಸಿಬ್ಬಂದಿಗಳಿಗೆ ಸಿಆಸು ಇಲಾಖೆಯಿಂದಲೇ ವೇತನ ಪಾವತಿಸುವಂತೆ ಕಂದಾಯ ಇಲಾಖೆಯು ಕೋರಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಅಸೇ 2010, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2010.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ 6–9–2008 ರ ಆದೇಶದಲ್ಲಿ ಸೃಜಿಸಲಾಗಿರುವ ಕಾನೂನು ಅಧಿಕಾರಿಗಳಲ್ಲಿ ಮತ್ತೊಂದು ಕಾನೂನು ಅಧಿಕಾರಿಯ ಹುದ್ದೆಯನ್ನು ದಿನಾಂಕ 1–4–2010 ರಿಂದ ದಿನಾಂಕ 31–3–2011 ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2683

**ಎ. ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–3)

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2010–11 ರ ಹಣಕಾಸು ವರ್ಷದಲ್ಲಿ ಮೂರನೇ ಕಂತಿನ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010 ದಿನಾಂಕ 24–04–2010
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 12 ಪಿಎಸ್‌ಆರ್ 2010 ದಿನಾಂಕ 26–04–2010
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010 ದಿನಾಂಕ 09–08–2010

**ಪ್ರಸ್ತಾವನೆ :**

1. 2010–11 ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ರೂಪದಲ್ಲಿ ರೂ. 213.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಮೇಲೆ ಕ್ರಮಾಂಕ – 1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, 2010–11 ನೇ ಸಾಲಿಗೆ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ಮೊದಲನೇ ಕಂತಿನ ಹಣ ರೂ. 51,66,095/– ನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲಾಗಿದೆ.
3. ಮೇಲೆ ಕ್ರಮಾಂಕ – 2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸದಸ್ಯರ Panel of names ಆಯ್ಕೆ ಸಮಿತಿ ಸದಸ್ಯರ ಪ್ರಯಾಣ ಭತ್ಯೆ ವೆಚ್ಚವನ್ನು ಮರುಪಾವತಿಸುವ ಸಲುವಾಗಿ 28,905/– ರೂ. ಗಳನ್ನು "2801–80–101–1–07–101 ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ಸಹಾಯಾನುದಾನ (ಯೋಜನೇತರ)" ಲೆಕ್ಕಶೀರ್ಷಿಕೆಯಡಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಲಾಗಿದೆ.
4. ಮೇಲೆ ಕ್ರಮಾಂಕ – 3 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, 2010–11 ನೇ ಸಾಲಿಗೆ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 53,25,000/– ನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲಾಗಿದೆ.
5. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಮೂರನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 53,25,000/– ನ್ನು ಪ್ರಸಕ್ತ ಹಣಕಾಸು ವರ್ಷದಲ್ಲಿ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2010 ಬೆಂಗಳೂರು, ದಿನಾಂಕ: 20–10–2010.**

ಸರ್ಕಾರವು, 2010–11 ನೇ ಹಣಕಾಸು ವರ್ಷದ ಮೂರನೇ ತ್ರೈಮಾಸಿಕ ಅವಧಿಗೆ "2801–80–101–1–07–101 (Grant-in-aid) ಸಹಾಯಾನುದಾನ" ಯೋಜನೇತರ ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 53,25,000/– (ಐವತ್ತೂರು ಲಕ್ಷದ ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆಯ ಇವರ ಮೇಲು ರುಜುವನ್ನು "ಕಚಿಥಿಜಙ ಖಜಬಿಜುಠಿಣ" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02–09–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–05–2008 ಮತ್ತು ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ 20–04–2010 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಪಿ.ಆರ್. 2684

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನಿ(ಉ) ವಲಯ/ಬಿಜೆಪಿ/ಎಇ–1/2010–11/5611 ದಿನಾಂಕ 12–10–2010.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28–10–2010 ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/09–10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ನೀಡಿದ ಮೊತ್ತ ಹಾಗೂ ತಾಂತ್ರಿಕ ಮಂಜೂರಾತಿಯ ನೋಂದಣಿ ಸಂಖ್ಯೆ |
|---|---|---|---|
| ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಸಿಲ್ತಿಬಾವಿ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 49.98 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 49.98 ಲಕ್ಷ ಸಂಖ್ಯೆ : 41/06–10 |
| ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕೈತನಾಳ–ಹೊಸೂರು ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 30.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 30.00 ಲಕ್ಷ ಸಂಖ್ಯೆ : 114/06–10 |
| ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕೌಜಲಗಿ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 167.96 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 19.00 ಲಕ್ಷ ಸಂಖ್ಯೆ : 115/06–10 |
| | **247.94** | | |

ಈ ಕಾಮಗಾರಿಗಳನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 30-08-2010 |
| ವಿಜಯ ಕರ್ನಾಟಕ ದಿನಪತ್ರಿಕೆ | 30-08-2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 30-08-2010 |

ದಿನಾಂಕ : 17-09-2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಇಬ್ಬರು ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ : 29-09-2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 78,14,395/- |
|---|---|---|---|---|
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 75,55,259/- |
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಹನುಮಂತ ಸಾಗರ, ಪ್ರಥಮ ದರ್ಜೆ ಗುತ್ತಿಗೆದಾರರು | 94,09,939/- | 20.42 ಹೆಚ್ಚು | 24.55 ಹೆಚ್ಚು |

ಮೇಲ್ಕಂಡಂತೆ ಶ್ರೀ ಹನುಮಂತ ಸಾಗರ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.55 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14-10-2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 75,55,259/-ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 84,99,666/- ಗಳಿಗೆ ಕಾಮಗಾರಿಯನ್ನು ಶ್ರೀ ಹನುಮಂತ ಸಾಗರ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 74 ಕೆಜಿದು 2010 ಬೆಂಗಳೂರು, ದಿನಾಂಕ: 30 ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ ಪ್ಯಾಕೇಜ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 75,55,259/-ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 84,99,666/-ಗಳಿಗೆ (ರೂ. ಎಂಬತ್ತನಾಲ್ಕು ಲಕ್ಷ ತೊಂಬತ್ತೊಂಭತ್ತು ಸಾವಿರದ ಆರು ನೂರ ಅರವತ್ತ ಆರು) ಕಾಮಗಾರಿಯನ್ನು ಶ್ರೀ ಹನುಮಂತ ಸಾಗರ, 1 ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2725

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನಿ(ಉ) ವಲಯ/ಬಿಜೆಪಿ/ಎಇ–1/2010–11/5438 ದಿನಾಂಕ 01–10–2010.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28–10–2010 ರ ಪತ್ರ ಸಂಖ್ಯೆ : ಮುಸದ/ಆಪ್ರಶಾಖೆ/ಟೆಂಡರ್/09–10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಭಾರತ ಸರ್ಕಾರದಿಂದ ಅನುಮೋದನೆಯಾಗಿರುವ ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಯಲಿಹಡಗಲಿ ಹತ್ತಿರ ಇಂಗುಕೆರೆ ಸುಧಾರಣೆ ಕಾಮಗಾರಿ | 20.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 20.00 ಲಕ್ಷ ಸಂಖ್ಯೆ : 46/06–10 |
| ಗಂಡೆವಾಡಿ ಸೈಟ್ ನಂ.–2 ಇಂಗುಕೆರೆ ಸುಧಾರಣೆ ಕಾಮಗಾರಿ | 14.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 14.00 ಲಕ್ಷ ಸಂಖ್ಯೆ : 17/06–10 |
| ಮದೆಭಾವಿ ಇಂಗುಕೆರೆ ಸುಧಾರಣೆ ಕಾಮಗಾರಿ | 10.50 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 10.50 ಲಕ್ಷ ಸಂಖ್ಯೆ : 33/06–10 |
| ಗುಂಡೆವಾಡಿ ಇಂಗುಕೆರೆ ಸುಧಾರಣೆ ಕಾಮಗಾರಿ | 6.25 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 6.25 ಲಕ್ಷ ಸಂಖ್ಯೆ : 2/06–10 |
| ಲೋಕೂರ ಇಂಗುಕೆರೆ ಸುಧಾರಣೆ ಕಾಮಗಾರಿ | 7.25 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 7.25 ಲಕ್ಷ ಸಂಖ್ಯೆ : 3/06–10 |
| ಅರತಾಳ ಇಂಗುಕೆರೆ ಸುಧಾರಣೆ ಕಾಮಗಾರಿ | 7.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 5.62 ಲಕ್ಷ ಸಂಖ್ಯೆ : 4/06–10 |
| ಬಡಚಿ ಸೈಟ್ ನಂ.–2 ಇಂಗುಕೆರೆ ಸುಧಾರಣೆ ಕಾಮಗಾರಿ | 7.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ. | ರೂ. 5.50 ಲಕ್ಷ ಸಂಖ್ಯೆ : 5/06–10 |
| **ಒಟ್ಟು** | **72.00** | | |

ಈ ಕಾಮಗಾರಿಗಳನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–07–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 16–07–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 17–07–2010 |
| ಕರ್ನಾಟಕ ರಾಜ್ಯಪತ್ರ | 29–07–2010 |

ದಿನಾಂಕ : 21-08-2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಎರಡು ಜನ ಗುತ್ತಿಗೆದಾರರ ಪೈಕಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು ದಿನಾಂಕ : 08-09-2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 56,02,411/- |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಪ್ರಕಾಶ ಬಿ. ಬೆಣಚಿನಮರಡಿ, ಪ್ರಥಮ ದರ್ಜೆ ಗುತ್ತಿಗೆದಾರರು | 64,80,164/- | 15.67<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಶ್ರೀ ಪ್ರಕಾಶ ಬಿ. ಬೆಣಚಿನಮರಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.67 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14-10-2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 56,02,411/-ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 63,02,712/- ಗಳಿಗೆ ಕಾಮಗಾರಿಯನ್ನು ಶ್ರೀ ಪ್ರಕಾಶ ಬಿ. ಬೆಣಚಿನಮರಡಿ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 76 ಕೆಜಿದು 2010 ಬೆಂಗಳೂರು, ದಿನಾಂಕ: 30 ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 56,02,411/- ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 63,02,712/- ಗಳಿಗೆ (ರೂ. ಅರವತ್ತಮೂರು ಲಕ್ಷ ಎರಡು ಸಾವಿರದ ಏಳು ನೂರ ಹನ್ನೆರಡು) ಕಾಮಗಾರಿಯನ್ನು ಶ್ರೀ ಪ್ರಕಾಶ ಬಿ. ಬೆಣಚಿನಮರಡಿ, 1 ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್.2726

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಶಂಕರದೊಡ್ಡ ಕೆರೆ, ಹೊನ್ನಾವರ ದೊಡ್ಡಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ (ಪ್ಯಾಕೇಜ್-18) ಟೆಂಡರ್ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ)/ತಾಂ. 2/ಸಇಂ. 2/ಹಾಸನ/ಆರ್.ಆರ್.ಆರ್. ಇ-ಟೆಂಡರ್/2010/2943 (೦) ದಿನಾಂಕ 13-10-2010.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28-10-2010 ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/09-10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕಿನ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಕಾಮಗಾರಿ ಹೆಸರು | ಹಾಸನ ತಾಲ್ಲೂಕಿನ ಶಂಕ ದೊಡ್ಡ ಕೆರೆ | ಹಾಸನ ತಾಲ್ಲೂಕಿನ ಹೊನ್ನಾವರ ದೊಡ್ಡ ಕೆರೆ |
|---|---|---|---|
| 1 | ಮಂಜೂರಾದ ಅಂದಾಜಿನ ಮೊತ್ತ | ರೂ. 48.00 ಲಕ್ಷ | ರೂ. 60.00 ಲಕ್ಷ |
| 2 | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರುರವರ ಎಸ್.ಇ.ಆರ್ ಸಂಖ್ಯೆ : 5/2010-11 ದಿನಾಂಕ ರಲ್ಲಿ ನೋಂದಾಯಿಸಿದೆ. | ಮುಖ್ಯ ಇಂಜಿನಿಯರ್ ಇವರ ಸಿ.ಇ.ಆರ್ ಸಂಖ್ಯೆ : 68/2010-11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. |

ಈ ಕಾಮಗಾರಿಗಳನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07-07-2010 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 03-07-2010 |
| ದಿ ನ್ಯೂ ಇಂಡಿಯನ್ ಎಕ್ಸ್ ಪ್ರೆಸ್, ಪ್ರಜಾವಾಣಿ ಹಾಗೂ ವಿಜಯ ಕರ್ನಾಟಕ ದಿನ ಪತ್ರಿಕೆ | 08-07-2010 |

ದಿನಾಂಕ : 05-08-2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 6 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ : 01-09-2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | | | ರೂ. 83,73,259/- |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 93,44,550/- | 11.59<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.59 ರಷ್ಟು ಹೆಚ್ಚಾಗಿದ್ದು,

ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14-10-2010 ರಂದು ಇಲಾಖಾ ಟೆಂಡರ್ ಪರಿಶೀಲನ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 83,73,259/-ಗಳ ಮೇಲೆ ಶೇ. 11.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 93,36,184/- ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 79 ಕೆಜಿದು 2010 ಬೆಂಗಳೂರು, ದಿನಾಂಕ: 30 ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಶಂಕದೊಡ್ಡ ಕೆರೆ, ಹೊನ್ನಾವರ ದೊಡ್ಡಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ (ಪ್ಯಾಕೇಜ್-18) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 83,73,259/- ಗಳ ಮೇಲೆ ಶೇ. 11.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 93,36,184/- ಗಳಿಗೆ (ರೂ. ತೊಂಬತ್ತಮೂರು ಲಕ್ಷ ಮೂವತ್ತಾರು ಸಾವಿರದ ನೂರ ಎಂಬತ್ತನಾಲ್ಕು) ಕಾಮಗಾರಿಯನ್ನು ಶ್ರೀ ಎಸ್. ನಾರಾಯಣ ರೆಡ್ಡಿ, 1 ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2727

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಆರ್.ಆರ್.ಆರ್. ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಭಾಲ್ಕಿ ಕೆರೆ ಹಾಗೂ ಔರಾದ್ ತಾಲ್ಲೂಕಿನ ಕಮಲನಗರ ಸಣ್ಣ ನೀರಾವರಿ ಕೆರೆಗಳ ಅಭಿವೃದ್ಧಿ ಕಾಮಗಾರಿಗಳ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನೀ/(ಉ)ವಲಯ/ಬಿಜೆಪಿ/ಎಇ-6/2010-11/5619 ದಿನಾಂಕ 12-10-2010.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28-10-2010 ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/09-10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಬೀದರ್ ಜಿಲ್ಲೆಯ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಭಾರತ ಸರ್ಕಾರದಿಂದ ಅನುಮೋದನೆಯಾಗಿರುವ ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಭಾಲ್ಕಿ ತಾಲ್ಲೂಕಿನ ಭಾಲ್ಕಿ ಕೆರೆ ಸುಧಾರಣೆ ಕಾಮಗಾರಿ | 68.00 | ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ | ರೂ. 68.00 ಲಕ್ಷ ಸಂಖ್ಯೆ : 3599 ದಿನಾಂಕ : 23-06-10 |
| ಔರಾದ್ ತಾಲ್ಲೂಕಿನ ಕಮಲನಗರ ಕೆರೆ ಸುಧಾರಣೆ ಕಾಮಗಾರಿ | 86.00 | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ | ರೂ. 86.00 ಲಕ್ಷ ಸಂಖ್ಯೆ : 3597 ದಿನಾಂಕ : 23-06-10 |
| **ಒಟ್ಟು** | **154.00** | | |

ಈ ಕಾಮಗಾರಿಗಳ ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 17–07–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 21–07–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 20–07–2010 |

ದಿನಾಂಕ : 20–08–2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಇಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ : 21–08–2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,24,75,973/– |
|---|---|---|---|---|
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,23,76,642/– |
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಗುರುನಾಥ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು | 1,30,73,620/– | 4.79 ಹೆಚ್ಚು | 5.63 ಹೆಚ್ಚು |
| 2 | ಶ್ರೀ ಶಾರದಾ ಕನ್‌ಸ್ಟ್ರಕ್ಷನ್ಸ್, 1ನೇ ದರ್ಜೆ ಗುತ್ತಿಗೆದಾರರು | 1,37,65,877/– | 10.34 ಹೆಚ್ಚು | 11.22 ಹೆಚ್ಚು |

ಮೇಲ್ಕಂಡಂತೆ ಶ್ರೀ ಗುರುನಾಥ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕನಿಷ್ಟ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.63 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14–10–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಟೆಂಡರ್‌ನಲ್ಲಿ ನಮೂದಿಸಿರುವ ಮೂಲ ದರಗಳನ್ನು ಅಂದರೆ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,23,76,642/– ಗಳ ಮೇಲೆ ಶೇ. 5.63 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,30,73,620/– ಗಳಿಗೆ ಕಾಮಗಾರಿಯನ್ನು ಶ್ರೀ ಗುರುನಾಥ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 80 ಕೆಜಿದು 2010 ಬೆಂಗಳೂರು, ದಿನಾಂಕ: 30 ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್.ಆರ್.ಆರ್. ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಭಾಲ್ಕಿ ಕೆರೆ ಹಾಗೂ ಔರಾದ್ ತಾಲ್ಲೂಕಿನ ಕಮಲನಗರ ಸಣ್ಣ ನೀರಾವರಿ ಕೆರೆಗಳ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,23,76,642/– ಗಳ ಮೇಲೆ ಶೇ. 5.63 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,30,73,620/– ಗಳಿಗೆ (ರೂ ಒಂದು ಕೋಟಿ ಮೂವತ್ತು ಲಕ್ಷ ಎಪ್ಪತ್ಮೂರು ಸಾವಿರದ ಆರುನೂರ ಇಪ್ಪತ್ತು ಮಾತ್ರ) ಕಾಮಗಾರಿಯನ್ನು ಶ್ರೀ ಗುರುನಾಥ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್.2728

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಮುಗಳೂರು ದೊಡ್ಡ ಕೆರೆ ಮತ್ತು ಕೌಶಿಕ ದೊಡ್ಡ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ (ಪ್ಯಾಕೇಜ್-16) ಟೆಂಡರ್ ಕುರಿತು

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ) ತಾಂ. 2/ಸಇಂ. 2/ಹಾಸನ/ಆರ್.ಆರ್.ಆರ್. ಇ-ಟೆಂಡರ್/2010/2948 (ಎ) ದಿನಾಂಕ 13-10-2010.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರುರವರ ದಿನಾಂಕ 30-10-2010 ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/08-09/3172.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಹಾಸನ ಜಿಲ್ಲೆ ಹಾಗೂ ತಾಲ್ಲೂಕಿನ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಹಾಸನ ತಾಲ್ಲೂಕಿನ ಮೂಗಳೂರು ದೊಡ್ಡ ಕೆರೆ | 62.00 | ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | ಸಿ.ಇ.ಆರ್. ಸಂಖ್ಯೆ : 30/2010-11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ |
| ಹಾಸನ ತಾಲ್ಲೂಕಿನ ಕೌಶಿಕ ದೊಡ್ಡ ಕೆರೆ | 70.00 | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | ಸಿ.ಇ.ಆರ್. ಸಂಖ್ಯೆ : 100/2010-11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ |

ಈ ಕಾಮಗಾರಿಗಳನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07-07-2010 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 03-07-2010 |
| ದಿ ನ್ಯೂ ಇಂಡಿಯನ್ ಎಕ್ಸ್ ಪ್ರೆಸ್ ಹಹಾಗೂ ಪ್ರಜಾವಾಣಿ ದಿನ ಪತ್ರಿಕೆ | 08-07-2010 |

ಅನಿವಾರ್ಯ ಕಾರಣಗಳಿಂದ ಮುಂದೂಡಿಕೆ ಟೆಂಡರ್ ಪ್ರಕಟಣೆ ಹೊರಡಿಸಲಾಗಿದೆ.

ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 2 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು 6-09-2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 102,33,108/- |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ಸಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ. ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರು | 113,90,125/- | 11.30 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ. ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.30 ರಷ್ಟು ಹೆಚ್ಚಾಗಿದ್ದು,

ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29–10–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 102,33,108/– ಗಳ ಮೇಲೆ ಶೇ. 11.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,13,58,750/– ಗಳಿಗೆ ಕಾಮಗಾರಿಯನ್ನು ಶ್ರೀ ಬಿ. ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 82 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಮುಗಳೂರು ದೊಡ್ಡ ಕೆರೆ ಮತ್ತು ಕೌಶಿಕ ದೊಡ್ಡ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 102,33,108 /– ಗಳ ಮೇಲೆ ಶೇ. 11.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,13,58,750/– ಗಳಿಗೆ (ರೂ ಒಂದು ಕೋಟಿ ಹದಿಮೂರು ಲಕ್ಷ ಐವತ್ತೆಂಟು ಸಾವಿರದ ಏಳುನೂರ ಐವತ್ತು) ಕಾಮಗಾರಿಯನ್ನು ಶ್ರೀ ಬಿ. ಎಸ್. ಅಶೋಕ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಪಿ.ಆರ್.2729

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಯಗಟಿ ಉರಮುಂದಿನ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ (ಪ್ಯಾಕೇಜ್–10) ಟೆಂಡರ್ ಕುರಿತು.

**ಓದಲಾಗಿದೆ:**
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.2/ಸಇಂ.2/ಚಿಕ್ಕಮಗಳೂರು/ಯಗಟಿ ಊರಮುಂದಿನಕೆರೆ/ಇ–ಟೆಂಡರ್/2010/ 3044 ದಿನಾಂಕ 21.10.2010.
2) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 30.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/08–09/3172

**ಪ್ರಸ್ತಾವನೆ:**

ಆರ್.ಆರ್.ಆರ್ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಯಗಟಿ ಉರಮುಂದಿನ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯು ಸೇರಿದ್ದು, ಈ ಕಾಮಗಾರಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಯಗಟಿ ಊರ ಮುಂದಿನ ಕೆರೆ | 125.00 | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು | ಸಿ.ಇ.ಆರ್ ಸಂಖ್ಯೆ: 86/2010–11ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. |

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07.07.2010 |
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 05.07.2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ವಿಜಯ ಕರ್ನಾಟಕ ಹಾಗೂ ಪ್ರಜಾವಾಣಿ ದಿನ ಪತ್ರಿಕೆ | 08.07.2010 |

ಅನಿವಾರ್ಯ ಕಾರಣಗಳಿಂದ ಮುಂದೂಡಿಕೆ ಟೆಂಡರ್ ಪ್ರಕಟಣೆ ಹೊರಡಿಸಲಾಗಿದೆ.

ದಿನಾಂಕ 20.08.2010 ರಂದು ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್ ನಲ್ಲಿ ಭಾಗವಹಿಸಿದ್ದ 2 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 4.10.2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.97,93,907/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್ ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
|---|---|---|---|
| 1 | ಡಿ.ಕೆ. ಲೋಹಿತ್, 1ನೇ ದರ್ಜೆ ಗುತ್ತಿಗೆದಾರರು. | 112,64,904/– | 15.02 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಕೆ. ಲೋಹಿತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್ ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.02 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್ ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 97,93,907/– ಗಳ ಮೇಲೆ ಶೇ.14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,65,054/– ಗಳಿಗೆ ಕಾಮಗಾರಿಯನ್ನು ಶ್ರೀ ಡಿ.ಕೆ.ಲೋಹಿತ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 84 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು, ಯಗಟಿ ಉರಮುಂದಿನ ಕೆರೆಯ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 97,93,907/– ಗಳ ಮೇಲೆ ಶೇ. 14.0 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,65,054/– ಗಳಿಗೆ (ರೂ ಒಂದು ಕೋಟಿ ಹನ್ನೊಂದು ಲಕ್ಷ ಅರವತ್ತೈದು ಸಾವಿರದ ಐವತ್ತನಾಲ್ಕು) ಕಾಮಗಾರಿಯನ್ನು ಶ್ರೀ ಡಿ.ಕೆ. ಲೋಹಿತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2730

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು, ಹೊಸಮದಗಕೆರೆ ಕಾಲುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸವಿ 2009(20), ದಿನಾಂಕ: 07.01.2010.
2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.2/ಸಇಂ–2/ಚಿಕ್ಕಮಗಳೂರು/ಹೊಸಮದಗಕೆರೆ ಎ.ಐ.ಬಿ.ಪಿ. ಇ–ಟೆಂಡರ್/2010/3120 ದಿನಾಂಕ 28.10.2010.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 30.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/09–10/3112

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ.ಅಡಿ ರೂ.100.00 ಲಕ್ಷ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ಗೊಂಡಿರುವ ಈ ಕಾಮಗಾರಿಯ ಅಂದಾಜಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯರವರ ನೋಂದಣಿ ಸಂಖ್ಯೆ: 79/2010–11ರಡಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ. ಈ ಕಾಮಗಾರಿಗೆ ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ– ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 17.07.2010 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 17.07.2010 |
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 19.07.2010 |
| ವಿಜಯ ಕರ್ನಾಟಕ ದಿನ ಪತ್ರಿಕೆ. | 17.07.2010 |
| ಉದಯವಾಣಿ ದಿನ ಪತ್ರಿಕೆ. | 18.07.2010 |
| ದಿ ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ. | 17.07.2010 |

ದಿನಾಂಕ 16.08.2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಮೂರು ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುವುದಾಗಿ ವರದಿಯಾಗಿರುತ್ತದೆ. ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.97,81,263/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.97,81,263/– |
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್ ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
| 1 | ಶ್ರೀ ಜಿ.ಎಂ. ಬಸವರಾಜು ಪ್ರಥಮ ದರ್ಜೆ ಗುತ್ತಿಗೆದಾರರು. | 1,13,79,095/– | 16.33 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ.ಎಂ. ಬಸವರಾಜು, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 16.33 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 97,81,263/– ಗಳ ಮೇಲೆ ಶೇ.13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,01,734/– ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಎಂ. ಬಸವರಾಜು, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 86 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು, ಹೊಸಮದಗಕೆರೆ ಕಾಲುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಪರಿಷ್ಕೃತ ಮೊತ್ತ ರೂ. 97,81,263/– ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,01,734/–ಗಳಿಗೆ (ರೂ ಒಂದು ಕೋಟಿ ಹನ್ನೊಂದು ಲಕ್ಷ ಒಂದು ಸಾವಿರದ ಏಳು ನೂರ ಮೂವತ್ತನಾಲ್ಕು ಮಾತ್ರ) ಕಾಮಗಾರಿಯನ್ನು ಶ್ರೀ ಜಿ.ಎಂ. ಬಸವರಾಜು, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2731

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ ತಿಮ್ಮಸಂದ್ರ ಅರಸೀಕೆರೆ, ತಿಮ್ಮಸಂದ್ರ ನಲ್ಲಸಾನಿಕೆರೆ, ತಿಮ್ಮನಾಯಕನಹಳ್ಳಿ ನಾಗಲಕೆರೆ, ಒಡೆಯನಕೆರೆ ಹೊಸಕೆರೆ ಮತ್ತು ಒಡೆಯನಕೆರೆ ಹಳೇಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:**

1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.3/ಸಇ.7/ಕೋಲಾರ/ ಆರ್.ಆರ್.ಆರ್.ಇ– ಟೆಂಡರ್/2010/2919 ದಿನಾಂಕ 11.10.2010.

2) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/09–10/3112

**ಪ್ರಸ್ತಾವನೆ:**

ಆರ್.ಆರ್.ಆರ್ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ, ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಶಿಡ್ಲಘಟ್ಟ ತಾಲ್ಲೂಕಿನ ತಿಮ್ಮಸಂದ್ರ ಅರಸೀ ಕೆರೆ | 30.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 85/2010–11 ದಿನಾಂಕ 20.05.2010 |
| ಶಿಡ್ಲಘಟ್ಟ ತಾಲ್ಲೂಕಿನ ತಿಮ್ಮಸಂದ್ರ ನಲ್ಲಸಾನೀ ಕೆರೆ | 23.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 75/2010–11 ದಿನಾಂಕ 20.05.2010 |
| ಶಿಡ್ಲಘಟ್ಟ ತಾಲ್ಲೂಕಿನ ತಿಮ್ಮನಾಯಕನಹಳ್ಳಿ ಕೆರೆ | 24.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 55/2010–11 ದಿನಾಂಕ 20.05.2010 |
| ಶಿಡ್ಲಘಟ್ಟ ತಾಲ್ಲೂಕಿನ ಒಡೆಯನ ಕೆರೆ ಹೊಸ ಕೆರೆ | 19.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 105/2010–11 ದಿನಾಂಕ 20.05.2010 |
| ಶಿಡ್ಲಘಟ್ಟ ತಾಲ್ಲೂಕಿನ ಒಡೆಯನ ಕೆರೆ ಹಳೇ ಕೆರೆ | 15.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 51/2010–11 ದಿನಾಂಕ 20.05.2010 |

ಈ ಕಾಮಗಾರಿಗಳ ಕೈಗೊಳ್ಳಲು ಕೋಲಾರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 19.07.2010 |
| ರಾಜ್ಯ ಜಿಲ್ಲಾ ಟೆಂಡರ್ ಬುಲೆಟಿನ್ | 16.07.2010 |
| ಪ್ರಜಾವಾಣಿ ದಿನ ಪತ್ರಿಕೆ | 11.07.2010 |

ದಿನಾಂಕ 20.08.2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 2 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 17.9.2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.83,50,969/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್ ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
|---|---|---|---|
| 1 | ಶರಣ್ ಡಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು. | 94,35,622/– | 12.99 ಹೆಚ್ಚು |

ಮೇಲ್ಕಂಡಂತೆ ಶ್ರೀ ಶರಣ್ ಡಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.99 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 83,50,969/– ಗಳ ಮೇಲೆ ಶೇ.12.25 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 93,73,963/– ಗಳಿಗೆ ಕಾಮಗಾರಿಯನ್ನು ಶ್ರೀ ಶರಣ್ ಡಿ ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 78 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ, ತಿಮ್ಮಸಂದ್ರ ಅರಸೀಕೆರೆ ತಿಮ್ಮಸಂದ್ರ ನಲ್ಲಸಾನೀಕೆರೆ ತಿಮ್ಮನಾಯಕನಹಳ್ಳಿ ನಾಗಲಕೆರೆ, ಒಡೆಯನಕೆರೆ ಹೊಸಕೆರೆ ಮತ್ತು ಒಡೆಯನಕೆರೆ ಹಳೇಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 83,50,969/– ಗಳ ಮೇಲೆ ಶೇ. 12.25 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 93,73,963/–ಗಳಿಗೆ (ರೂ ತೊಂಬತ್ತಮೂರು ಲಕ್ಷ ಎಪ್ಪತ್ತ ಮೂರು ಸಾವಿರದ ಒಂಬೈನೂರ ಅರವತ್ತಮೂರು) ಕಾಮಗಾರಿಯನ್ನು ಶ್ರೀ ಶರಣ್ ಡಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಪಿ.ಆರ್ 2732

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ ಅಮಾನಿಬಲ್ಲದಕೆರೆ, ಮತ್ತು ಅಮಾನಿಭದ್ರನ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸನೀಇ 26 ಕೆಜಿದು 2010 (3) ದಿನಾಂಕ 19.5.2010.
2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.3/ಸಇ.7/ಕೋಲಾರ/ ಆರ್.ಆರ್.ಆರ್.ಇ- ಟೆಂಡರ್/2010/2919 ದಿನಾಂಕ 11.10.2010.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.10.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ಟೆಂಡರ್/09-10/3112.

**ಪ್ರಸ್ತಾವನೆ:**

ಆರ್.ಆರ್.ಆರ್ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ, ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುವ ಮೊತ್ತ ಮಂಜೂರಾತಿ ಸಂಖ್ಯೆ ಹಾಗೂ ದಿನಾಂಕ |
|---|---|---|---|
| ಶಿಡ್ಲಘಟ್ಟ ತಾಲ್ಲೂಕಿನ ಅಮಾನಿ ಬಲ್ಲದ ಕೆರೆ | 46.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು | ಎಸ್.ಇ.ಆರ್ ಸಂಖ್ಯೆ: 20/2010-11 ದಿನಾಂಕ 20.05.2010 |
| ಶಿಡ್ಲಘಟ್ಟ ತಾಲ್ಲೂಕಿನ ಅಮಾನಿ ಭದ್ರನ ಕೆರೆ | 213.50 | ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ | ಮುಖ್ಯ ಇಂಜಿನಿಯರ್ ಇವರ ಸಿ.ಇ.ಆರ್ ಸಂಖ್ಯೆ: 83/2010-11 ದಿನಾಂಕ 07.07.2010 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿದೆ. |
| ಒಟ್ಟು | 259.50 | | |

ಈ ಕಾಮಗಾರಿಗಳು ಕೈಗೊಳ್ಳಲು ಕೋಲಾರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12.07.2010 |
| ರಾಜ್ಯ ಟೆಂಡರ್ ಬುಲೆಟಿನ್ | 17.07.2010 |
| ಪ್ರಜಾವಾಣಿ ದಿನ ಪತ್ರಿಕೆ | 17.07.2010 |

ದಿನಾಂಕ 20.08.2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 2 ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ನ್ನು 17.9.2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.2,00,84,426/- |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್ ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ /ಕಡಿಮೆ |
|---|---|---|---|
| 1 | ಶರಣ್ ಡಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು. | 2,62,69,323 | 30.79 ಹೆಚ್ಚು |

ಮೇಲ್ಕಂಡಂತೆ ಶ್ರೀ ಶರಣ್ ಡಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.79 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14/10/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,00,84,426/– ಗಳ ಮೇಲೆ ಶೇ.13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,27,95,824/– ಗಳಿಗೆ ಕಾಮಗಾರಿಯನ್ನು ಶ್ರೀ ಶರಣ್ ಡಿ ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 77 ಕೆಜಿದು 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ, ಅಮಾನಿಬಲ್ಲದ ಕೆರೆ, ಮತ್ತು ಅಮಾನಿಭದ್ರನಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,00,84,426/– ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,27,95,824/–(ರೂ ಎರಡು ಕೋಟಿ ಇಪ್ಪತ್ತೇಳು ಲಕ್ಷ ತೊಂಬತ್ತೈದು ಸಾವಿರದ ಎಂಟು ನೂರ ಇಪ್ಪತ್ತನಾಲ್ಕು) ಕಾಮಗಾರಿಯನ್ನು ಶ್ರೀ ಶರಣ್ ಡಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2733

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ನವಿಲೆ ಏತ ನೀರಾವರಿ ಯೋಜನೆ ಬಳಿ ಶಿಂಷಾ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ; ಸನೀಇ 07 ಅಪಿಬಂ 2001, ದಿನಾಂಕ 31/02/2001.
2) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 10/08/10 ರಂದು ಕೊನೆಗೊಂಡ ಪತ್ರ ಸಂಖ್ಯೆ: ಮುಸದ/ ತಾಂಸ–2 ಸ.ಇಂ–4/ ಮಂಡ್ಯ ಜಿಲ್ಲೆ/ನ.ಏ.ನೀ.ಯೋ/ ವರ್ಕ್‌ಸ್ಲಿಪ್/ಇಐಆರ್‌ಎಲ್/ 2010–11/2474

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು ನವಿಲೆ ಏತ ನೀರಾವರಿ ಯೋಜನೆ ಬಳಿ ಶಿಂಷಾ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಕಾಮಗಾರಿಯನ್ನು ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತದ ಮೇಲೆ ಶೇ.5.98 ರಷ್ಟು ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ. 79,30,083–00ಗಳಿಗೆ ಗುತ್ತಿಗೆದಾರರಿಗೆ ವಹಿಸಲಾಗಿತ್ತು.

2) ಕಾಮಗಾರಿಯು ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್ ರವರು ಹಾಗೂ ಅಧೀಕ್ಷಕ ಇಂಜಿನಿಯರ್ ರವರು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ಟೆಂಡರ್ ನಲ್ಲಿ ನಿಗಧಿಪಡಿಸಿದ್ದಕ್ಕಿಂತ ಹೆಚ್ಚುವರಿ ಪರಿಮಾಣಗಳನ್ನು ಹಾಗೂ ಕೆಲವು ಕೆಲಸಗಳನ್ನು ಹೆಚ್ಚುವರಿಯಾಗಿ ಗುತ್ತಿಗೆದಾರರು ನಿರ್ವಹಿಸಿದ್ದರಿಂದ ಕಾಮಗಾರಿಯ ವೆಚ್ಚದಲ್ಲಿ ಹೆಚ್ಚಳವಾಗಿದೆ. ಈ ಕಾಮಗಾರಿಯಲ್ಲಿ ಉಂಟಾಗಿರುವ ಹೆಚ್ಚಿನ ಆರ್ಥಿಕ ಹೊರೆ ಮೊತ್ತವನ್ನು ಮಂಜೂರಾದ ಮೂಲ ಅಂದಾಜು ಮೊತ್ತಕ್ಕೆ ಹೋಲಿಸಿದಾಗ ಶೇ. 56.10 ರಷ್ಟು ಹೆಚ್ಚುವರಿಯಾಗಿದೆ. ಹೀಗೆ ಉಂಟಾಗಿರುವ ಹೆಚ್ಚಿನ ಆರ್ಥಿಕ ಹೊರೆಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣವಲಯ, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 99 ಅಪಿಬಂ 2007, ಬೆಂಗಳೂರು, ದಿನಾಂಕ: 09ನೇ ನವೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ನವಿಲೆ ಏತ ನೀರಾವರಿ ಯೋಜನೆ ಬಳಿ ಶಿಂಷಾ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ನಿರ್ವಹಣೆಯಲ್ಲಿ ಹೆಚ್ಚುವರಿ ಉಂಟಾಗಿರುವ ವರ್ಕ್‌ಸ್ಲಿಪ್ ಮತ್ತು

ಇ.ಐ.ಆರ್.ಎಲ್. ಮೊತ್ತ ಸೇರಿದಂತೆ ರೂ. 42,07,227/– ಗಳಿಗೆ (ನಲವತ್ತೆರಡು ಲಕ್ಷದ ಏಳು ಸಾವಿರದ ಇನ್ನೂರ ಇಪ್ಪತ್ತೇಳು ರೂ. ಗಳು ಮಾತ್ರ) ಸರ್ಕಾರವು ಅನುಮೋದನೆ ನೀಡಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 768, ಆಕೋ–1/2010,ದಿನಾಂಕ 14/10/2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

ಪಿ.ಆರ್ 2734

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಬಸವೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ 28 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ :ಕೆಆರ್ಇಡಿ/04/ಎಸ್‌ಬಿಎಸ್ಎಲ್/10/1146, ದಿನಾಂಕ : 24/27–4–2010 ಮತ್ತು ಕೆಆರ್ಇಡಿ/04/ಎಸ್‌ಬಿಎಸ್ಎಲ್/10/2269, ದಿನಾಂಕ : 30–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಬಸವೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಕಾರ್ಜೋಳ್ ಗ್ರಾಮದಲ್ಲಿ 28 MW (Gross) ಮತ್ತು 22 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 122 ಎನ್‌ಸಿಇ 2010, ಬೆಂಗಳೂರು, ದಿನಾಂಕ : 28–10–2010**

1) ಮೆ॥ ಶ್ರೀ ಬಸವೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕಾರ್ಜೋಳ್ ಗ್ರಾಮದಲ್ಲಿ 28 MW (Gross) ಮತ್ತು 22 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ :–

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/Organizations such as Forest Department, Revenue Department, & Karnataka State Pollution Control Board, etc., for both the Sugar Mill and the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

2) ಸರ್ಕಾರದ ಪತ್ರಗಳ ಸಂಖ್ಯೆ : ಡಿಇ 104 ಎನ್‌ಸಿಇ 2001, ದಿನಾಂಕ : 15–9–2001 ಮತ್ತು 12–10–2001 ರಲ್ಲಿ ಮೆ॥ ಶ್ರೀ ಬಸವೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ ಬಸವನಬಾಗೇವಾಡಿ ತಾಲ್ಲೂಕಿನ ಮುಲ್ವಾಡ್ ಗ್ರಾಮದಲ್ಲಿ 16 MW (Gross) ಮತ್ತು 10 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನೀಡಿರುವ ನಿರಾಕ್ಷೇಪಣೆಯನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2741

## ಇಂಧನ ಸಚಿವಾಲಯ

**ವಿಷಯ :** ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿದ್ದು, ರದ್ದುಪಡಿಸಲಾಗಿರುವ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.:

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 241 ಎನ್‌ಸಿಇ 2002, ದಿನಾಂಕ 10–10–2002.
2) ಸರ್ಕಾರಿ ಆದೇಶ ಸಂಖ್ಯೆ : ಇಂಇ 241 ಎನ್‌ಸಿಇ 2003, ದಿನಾಂಕ 23–10–2003.
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 147 ಎನ್‌ಸಿಇ 2010, ದಿನಾಂಕ 19–6–2010.
4) ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರ ಪತ್ರಗಳ ದಿನಾಂಕ : 21–6–2010 ಮತ್ತು 25–6–2010.
5) ಸರ್ಕಾರದ ಪತ್ರ ಸಂಖ್ಯೆ : ಇಎನ್ 147 ಎನ್‌ಸಿಇ 2010, ದಿನಾಂಕ : 1–7–2010.
6) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಮಲ್ಲಿಬೆಟ್ಟು ಎಂಹೆಚ್‌ಎಸ್/2010/2271, ದಿನಾಂಕ : 30–7–2010.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ (ಮಲ್ಲಿಬೆಟ್ಟು ಗ್ರಾಮ) ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ತದ ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 6.00 ಮೆಗಾ ವ್ಯಾಟ್‌ನಿಂದ 10.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ, ಸರ್ಕಾರಿ ಆದೇಶ ಸಂಖ್ಯೆ : ಇಂಇ 241 ಎನ್‌ಸಿಇ 2002, ದಿನಾಂಕ : 10–10–2002, ಸರ್ಕಾರಿ ಆದೇಶ ಸಂಖ್ಯೆ : ಇಂಇ 241 ಎನ್‌ಸಿಇ 2003, ದಿನಾಂಕ : 23–10–2003 ರಲ್ಲಿ ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ (ಮಲ್ಲಿಬೆಟ್ಟು ಗ್ರಾಮ) ಅಡ್ಡಲಾಗಿ ಹಂಚಿಕೆಯಾಗಿದ್ದ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರು ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರ ರದ್ದುಪಡಿಸಿರುವ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತರುವಂತೆ ಕೋರಿ, ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯ ಬಗ್ಗೆ ಕೆಲವೊಂದು ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ. ಪ್ರಗತಿಯ ವಿವರ ಈ ಕೆಳಗಿನಂತಿದೆ :–

1. Clearance from Karnataka State Pollution Control Board
2. Fisheries Department Clearance
3. Factories and Boilers Division clearance
4. Evacuation approval from KPTCL
5. Power Purchase agreement with KPTCL
6. Technical Clearance from Karnataka Renewable Energy Development Limited
7. Irrigation clearance from the Irrigation Department
8. Agreement with the Irrigation Department
9. Clearance from the Revenue Department in respect of 19.58 acres of land
10. Execution of Lease Agreement for 19.58 acres between GOK and KREDL
11. Execution of Sub Lease Agreement for 19.58 acres between KREDL and the company
12. GOI approval for drawing of extra High Tension Power Line for the project (110 kv Double Circuit line from existing 110 kv Sub Station at Moodbidri to Proposed 110 kv ODY of the Mini Hydel Plant at Mullibettu, D.K. District)
13. GOI approval for drawing of Extra High Tension Power Line for the project (110 kv Single Circuit line from Proposed 110 kv ODY of the Mini Hydel Plant at Mullibettu, D.K. District to Proposed 110 kv ODY of the Mini Hydel Plant at Mannapitlu, D.K. District)
14. Permission from Deputy Commissioner, D.K. District for rock blasting at the project site.
15. Clearance from Forest Department for 4.2 ha. of forest land
16. Execution of Lease Agreement for releasing 4.2 ha. of forest land by the Forest Department
17. Clearance from the Ecology and Environment Department.
18. Attaining Financial Closure
19. Application made to State Bank of India-Seeking of Term Loan
20. Certification of project expenses by Chartered Accountant

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರದ ಪತ್ರದೊಂದಿಗೆ ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರ ದಿನಾಂಕ : 21–6–2010ರ ಪತ್ರವನ್ನು ಹಾಗೂ ಅದರ ಅಡಕಗಳನ್ನು ಕ್ರೆಡಲ್‌ಗೆ ಕಳುಹಿಸಿ ಯೋಜನೆಯ ಸ್ಥಳ ಪರಿವೀಕ್ಷಣೆ ಮಾಡಿ, ವರದಿಯನ್ನು ನೀಡಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ (ಮಲ್ಲಿಬೆಟ್ಟು ಗ್ರಾಮ) ಸ್ಥಳ ಪರಿವೀಕ್ಷಣೆ ಮಾಡಿ, ಪರಿವೀಕ್ಷಣಾ ವರದಿಯನ್ನು ಕಳುಹಿಸಿರುತ್ತಾರೆ.

ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಈ ಕೆಳಗಿನ ಕ್ರಮ ವಹಿಸಿರುವುದನ್ನು ತಪಾಸಣೆ ನಡೆಸಿದ ಕೆ.ಆರ್.ಇ.ಡಿ.ಎಲ್.ನ ಅಧಿಕಾರಿಗಳು ವರದಿ ಮಾಡಿದ್ದಾರೆ :–

1. This proposed Project is on the Down Stream of the already Commissioned 15 MW capacity soham Mannipatlu Mini Hydel Project of the same Company.
2. The Company is in possession of revenue land to an extent of 19.58 acres, forest land to an extent of 4.20 Ha. and private land to an extent of 4.26 acres required for implementation of the project (including land under submergence).
3. The Company has Erected and commissioned 110 KV S/C transmission line from the Out Door Switch Yard of their already Commissioned 15 MW capacity MHS at Mannapitlu to the Pooling station erected and commissioned adjacent to the 10.5 MW capacity Mullibettu Mini Hydel Project, covering a distance of 5.4 kms. The power generated from the already Commissioned 15 MW capacity project at Mannapitlu is getting evacuated through this pooling Station.
4. The Company has Erected and Commissioned 110 KV D/C transmission line from the Pooling Station existing adjacent to the proposed Mullibettu MHS to the 110/11 kv KPTCL sub-station at Moodibidri, covering a distance of 13.4 kms.
5. Provision has already been made in the pooling Station to evacuate the power generated from the 10.5 MW capacity proposed Mullibettu MHS to the 110/11 kv KPTCL sub-station at Moodibidri.
6. The poolling Station & 110 KV D/C transmission line from the Pooling Station to the 110/11 kv KPTCL sub-station at Moodibidri.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪರಿವೀಕ್ಷಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರು 10.5 ಮೆಗಾ ವ್ಯಾಟ್ ಸಾಮರ್ಥ್ಯದ (ಮಲ್ಲಿಬೆಟ್ಟು ಗ್ರಾಮ) ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುವುದನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 147 ಎನ್‌ಸಿಇ 2010, ಬೆಂಗಳೂರು, ದಿನಾಂಕ : 29–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಸಾಧಿಸಿರುವ ಪ್ರಗತಿಯನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 147 ಎನ್‌ಸಿಇ 2010 ದಿನಾಂಕ : 19–6–2010 ರಲ್ಲಿ ಮೆ॥ ಮೌಂಟ್ ಕೈಲಾಸ್ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ (ಮಲ್ಲಿಬೆಟ್ಟು ಗ್ರಾಮ) ಅಡ್ಡಲಾಗಿ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಯೋಜನೆಯನ್ನು ಪೂರ್ವಸ್ಥಿತಿಗೆ ತರಲಾಗಿದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಆಗಸ್ಟ್ 2012 ರವರೆಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2742

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/3333, ದಿನಾಂಕ 7–6–10.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ರಕಲ್ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ : 3/09 ರಲ್ಲಿ ದಿನಾಂಕ 30–6–09 ರಂದು ನೀಡಿರುವ ಆದೇಶವನ್ನು ಆಧರಿಸಿ ಸ್ವಾಧೀನಕ್ಕೊಳಪಟ್ಟ ಇತರೆ ಜಮೀನುಗಳಿಗೆ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ರಚಿಸಿರುವ ಐತೀರ್ಪಿನಂತೆ ಮೊತ್ತ ರೂ. 1,79,12,562–00 ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ : 7–6–10ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿದ್ದಾರೆ.

ಸಿವಿಲ್ ನ್ಯಾಯಾಲಯದ ಮೇಲ್ಕಂಡ ತೀರ್ಪನ್ನು ಆಧರಿಸಿ ಚಿಕ್ಕವಡ್ರಕಲ್ ಗ್ರಾಮದ ಸ.ನಂ. 1, 3, 4, 6, 43, 59, 21, 22 ಮತ್ತು 23ರ ಒಟ್ಟು 65–17 ಎಕರೆ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿದ ಅರ್ಜಿಯ ಮೇರೆಗೆ ಉಪವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಕೊಪ್ಪಳ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ : 26–3–10 ರಂದು ಐತೀರ್ಪನ್ನು ರಚಿಸಿರುತ್ತಾರೆ. ಪರಿಹಾರ ಧನದ ಮೇಲಿನ ಬಡ್ಡಿಯು ಭೂಸ್ವಾಧೀನ ಕಾಯ್ದೆಯ ತಿದ್ದುಪಡಿ ಪೂರ್ವದಲ್ಲಿ (ದಿನಾಂಕ : 23–9–84 ಕ್ಕಿಂತ ಹಿಂದಿನ ಅವಧಿಯಲ್ಲಿ) ಶೇ. 6 ರಂತೆ ಜಾರಿಯಲ್ಲಿದ್ದುದರಿಂದ, ಎಲ್.ಎ.ಸಿ. ತೀರ್ಪು 28(ಎ)ರಡಿಯ ಐತೀರ್ಪಿನ ಪ್ರಕರಣದಲ್ಲಿ ದಿನಾಂಕ : 2–3–72 ರಿಂದ 23–9–84 ರವರೆಗೆ ಶೇ. 5 ರಂತೆ ಮತ್ತು 4(1)ರ ಅಧಿಸೂಚನೆ ದಿನಾಂಕದಿಂದ ಮೊದಲನೆ ವರ್ಷಕ್ಕೆ ಶೇ. 9 ರಂತೆ ಹಾಗೂ ನಂತರದ ಅವಧಿಗೆ ಶೇ. 15 ರಂತೆ ಬಡ್ಡಿ ಪಾವತಿಸಲು ತೀರ್ಮಾನಿಸಿದೆ.

ಹೆಚ್ಚಿಸಿರುವ ಪರಿಹಾರ ಧನದ ಮೇಲೆ ಬಡ್ಡಿ ಹಾಗೂ ಸೊಲೇಷಿಯಂ ಪಾವತಿಸುವ ವಿಷಯದಲ್ಲಿ ಭೂಸ್ವಾಧೀನ ತಿದ್ದುಪಡಿ ಕಾಯ್ದೆ ದಿನಾಂಕ 24–9–84 ರ ಹಿಂದೆ ಇದ್ದಂತೆ ಶೇ. 15 ರಂತೆ ಸೊಲೇಷಿಯಂ ಹಾಗೂ ಶೇ. 6 ರಂತೆ ಬಡ್ಡಿಯನ್ನು ದಿನಾಂಕ: 23–9–84 ರವರೆಗೆ ನೀಡಬಹುದಾಗಿದೆ. ದಿನಾಂಕ 24–9–84ರ ನಂತರದ ಅವಧಿಗೆ ಹೆಚ್ಚಿಸಿದ ಪರಿಹಾರ ಧನದ ಮೇಲೆ ಶೇ 30 ರಂತೆ ಸೊಲೇಷಿಯಂ ಶೇ. 12 ರಷ್ಟು ಹೆಚ್ಚುವರಿ ಮಾರುಕಟ್ಟೆ ದರ ಸೇರಿದ ಮೊತ್ತಕ್ಕೆ ಮೊದಲನೆ ವರ್ಷಕ್ಕೆ ಶೇ. 9 ರಂತೆ ತದನಂತರದ ಅವಧಿಗೆ ಶೇ. 15 ರಂತೆ ಪಾವತಿಸಲು ಪರಿಗಣಿಸಿ ಲೆಕ್ಕ ಹಾಕಿದ್ದು, ಈ ಪ್ರಕರಣದಲ್ಲಿ ರೂ. 1,43,73,008–00ಗಳನ್ನು ಪಾವತಿಸಬೇಕಾಗುತ್ತದೆ. ಪಾವತಿಸಬೇಕಾದ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ.

| ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ಐತೀರ್ಪಿನ ಸಂಖ್ಯೆ ಸ.ಇಂ.ಭೂಸ್ವಾ/ನ6/164/70/71/28(ಎ) ಅಪೀಲು, ದಿನಾಂಕ 26–3–10 | | | |
|---|---|---|---|
| ಕ್ರ.ಸಂ. | ಚಿಕ್ಕವಡ್ರಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಲಕ್ಷಗಳಲ್ಲಿ) |
| 1 | 01 | 1–10 | 274903 |
| 2 | 03 | 4–37 | 1081935 |
| 3 | 04 | 20–00 | 4393644 |
| 4 | 06 | 12–34 | 2822916 |
| 5 | 43 | 8–38 | 1966155 |
| 6 | 59 | 10–00 | 2196822 |
| 7 | 21 | 3–12 | 724951 |
| 8 | 22 | 3–18 | 757904 |
| 9 | 23 | 0–28 | 153778 |
| | ಒಟ್ಟು | | 14373008 |

ಮುಖ್ಯ ಇಂಜಿನಿಯರ್‌ರವರ ಮೇಲ್ಕಂಡ ಎರಡು ಪ್ರಸ್ತಾವನೆಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿ ವಿಧಾನಗಳಂತೆ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 80 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 30ನೇ ಅಕ್ಟೋಬರ್ 2010**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ರಕಲ್ ಗ್ರಾಮದ ಸರ್ವೆ ನಂಬರ್ 1, 3, 4, 6, 43, 59, 21, 22 ಮತ್ತು 23ರ ಜಮೀನುಗಳಿಗೆ ಕೊಪ್ಪಳದ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ರಚಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 1,43,73,008–00 ಗಳನ್ನು ಒಟ್ಟು (ಒಂದು ಕೋಟಿ ನಲವತ್ಮೂರು ಲಕ್ಷದ ಎಪ್ಪತ್ಮೂರು ಸಾವಿರದ ಎಂಟು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪಾವತಿಸಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 816 ಆಕೋ–1/10, ದಿನಾಂಕ : 15–10–10ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2743 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/3032, ದಿನಾಂಕ 18–5–10.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ರಕಲ್ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ : 3/09 ರಲ್ಲಿ ದಿನಾಂಕ 30–6–09 ರಂದು ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 93,61,149–00ಗಳನ್ನು ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ದಿನಾಂಕ : 18–5–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 2–3–72ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ : 1–10–75 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ದಿನಾಂಕ : 30–6–2009ರಂದು ನೀಡಿರುವ ಆದೇಶದಲ್ಲಿ ಹೆಚ್ಚಿನ ಪರಿಹಾರ ಧನ ನಿಗದಿಪಡಿಸಿದೆ.

ಭೂಸ್ವಾಧೀನ ಕಾಯ್ದೆಯ ತಿದ್ದುಪಡಿ ಅವಧಿಗಿಂತ ಹಿಂದೆ ಅಂದರೆ ದಿನಾಂಕ : 24–9–84ರ ಪೂರ್ವದಲ್ಲಿ ಶೇ. 6 ರಂತೆ ಬಡ್ಡಿ ಪಾವತಿಸಲಾಗುತ್ತಿತ್ತು ಹಾಗೂ ಇದೇ ಅವಧಿಯಲ್ಲಿ ಪರಿಹಾರ ಧನದ ಮೇಲೆ ಶೇ. 15 ರಂತೆ ಸೊಲೇಷಿಯಂ ನೀಡಲಾಗುತ್ತಿತ್ತು. ಅದರಂತೆ, ಈ ಪ್ರಕರಣದಲ್ಲಿ ದಿನಾಂಕ 24–9–84ರ ಹಿಂದಿನ ಅವಧಿಗೆ ಪಾವತಿಸಬೇಕಾದ ಬಡ್ಡಿ ಮೊತ್ತ ಹಾಗೂ ತಿದ್ದುಪಡಿಯ ಕಾಯ್ದೆಯ ನಂತರ ನೀಡಬೇಕಾದ ಸೊಲೇಷಿಯಂ, ಶೇ. 12 ರಷ್ಟು ಹೆಚ್ಚುವರಿ ಮಾರುಕಟ್ಟೆ ದರ ಸೇರಿದಂತೆ ನ್ಯಾಯಾಲಯವು ಹೆಚ್ಚಿಸಿದ ಮೊತ್ತದ ಮೇಲೆ ಮೊದಲನೆ ವರ್ಷಕ್ಕೆ ಶೇ. 9 ರಂತೆ ತದನಂತರದ ಅವಧಿಗೆ ಶೇ. 15 ರಂತೆ ಬಡ್ಡಿ ಲೆಕ್ಕ ಹಾಕಿದ್ದು, ಈ ಪ್ರಕರಣದಲ್ಲಿ ರೂ. 75,51,876–00 ಗಳನ್ನು ಪಾವತಿಸಬೇಕಾಗುತ್ತದೆ. ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಚಿಕ್ಕವಡ್ರಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|---|
| 1 | 03/09 | 8, 12, 58 | 34–15 | 75,51,876–00 |
| | | **ಒಟ್ಟು** | | **75,51,876–00** |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 1345 ಎಲ್‌ಸಿಜಿ 2009, ದಿನಾಂಕ : 15–9–09 ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 72 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ರಕಲ್ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 3/09 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 75,51,876–00 ಗಳನ್ನು (ಎಪ್ಪತ್ತೈದು ಲಕ್ಷದ ಐವತ್ತೊಂದು ಸಾವಿರದ ಎಂಟುನೂರ ಎಪ್ಪತ್ತಾರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 816 ಆಕೋ–1/10, ದಿನಾಂಕ : 15–10–10ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2744

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಮತ್ತು ತಾಲ್ಲೂಕು ಹಿರೇಮಗಳೂರು ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2007, ದಿನಾಂಕ : 11–12–2007.

**2.** ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ : 3–9–10ರ ಪತ್ರ ಸಂಖ್ಯೆ : ಮುಸದ/ತಾಂಸ–2/ಸ.ಇಂ–2/ಚಿಕ್ಕಮಗಳೂರು/ಹಿರೇಮಗಳೂರು ದೊಡ್ಡಕೆರೆ/ವರ್ಕ್‌ಸ್ಲಿಪ್/2010/2643.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೆಚ್ಚಿನ ಆತ್ಮಹತ್ಯೆಗಳು ವರದಿಯಾಗಿರುವ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ಅನುಮೋದನೆಯಾಗಿರುವ ವಿಶೇಷ ಪ್ಯಾಕೇಜ್‌ನಡಿ ನಬಾರ್ಡ್ ಆರ್.ಐ.ಡಿ.ಎಫ್–13ರಲ್ಲಿ ರೂ. 6652.11 ಲಕ್ಷ ಅಂದಾಜು ಮೊತ್ತದ 270 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಚಿಕ್ಕಮಗಳೂರು ಜಿಲ್ಲೆ ಮತ್ತು ತಾಲ್ಲೂಕು ಹಿರೇಮಗಳೂರು ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ 45.00 ಲಕ್ಷ ರೂ.ಗಳ ಅಂದಾಜು ಮೊತ್ತದ ಕಾಮಗಾರಿಯೂ ಸಹ ಸೇರಿದೆ. ಈ ಕಾಮಗಾರಿಯನ್ನು ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತದ ಮೇಲೆ ಶೇ. 11.72 ರಷ್ಟು ಕಡಿಮೆ ಮೊತ್ತಕ್ಕೆ ಅಂದರೆ ರೂ. 40,37,855–00 ಗಳಿಗೆ ಗುತ್ತಿಗೆದಾರರಿಗೆ ವಹಿಸಲಾಗಿತ್ತು.

2. ಸದರಿ ಕೆರೆ ಏರಿಯ ಮೇಲೆ ಎಂ.ಡಿ.ಆರ್. ರಸ್ತೆ ಹಾದು ಹೋಗುತ್ತಿದ್ದು, ಪಿ.ಎಂ.ಜಿ.ಎಸ್.ವೈ. ಕಾರ್ಯಕ್ರಮದಲ್ಲಿ ಕೆರೆಯ ಏರಿ ಹಾಗೂ ಕೋಡಿ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಂಡಿರುವ ಕಾರಣ ಈ ಕಾಮಗಾರಿಗಳ ಬದಲಾಗಿ ಕಾಮಗಾರಿಯು ಜಾರಿಯಲ್ಲಿದ್ದ ಸಂದರ್ಭದಲ್ಲಿ ಅಧೀಕ್ಷಕ ಇಂಜಿನಿಯರ್‌ರವರು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ತೂಬುಗಾಲುವೆಗೆ ಬಾಕ್ಸ್ ಡ್ರೈನ್, ಕಾಂಕ್ರೀಟ್ ಲೈನಿಂಗ್, ಪೈಪ್ ಕಲ್ವರ್ಟ್, ಸೇವಾ ರಸ್ತೆ ಅಭಿವೃದ್ಧಿ ಕಾಮಗಾರಿ ನಿರ್ವಹಿಸಿರುತ್ತಾರೆ. ಇದರಿಂದಾಗಿ ಕಾಮಗಾರಿಯ ಒಟ್ಟಾರೆ ವೆಚ್ಚದಲ್ಲಿ ಹೆಚ್ಚಳವಾಗಿರುವುದಿಲ್ಲ. ಆದರೆ, ಈ ಕಾಮಗಾರಿಯಲ್ಲಿ ನಿರ್ವಹಿಸಿರುವ ಹೆಚ್ಚಿನ ಇ.ಐ.ಆರ್.ಎಲ್. ಸೇರಿ ಹೆಚ್ಚಿನ ಕೆಲಸಗಳಿಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 61 ಕೆಜಿದು 2010, ಬೆಂಗಳೂರು, ದಿನಾಂಕ : 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ ಮತ್ತು ತಾಲ್ಲೂಕು ಹಿರೇಮಗಳೂರು ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯ ನಿರ್ವಹಣೆಯಲ್ಲಿ ಉಂಟಾಗಿರುವ ವರ್ಕ್‌ಸ್ಲಿಪ್ ಮತ್ತು ಇ.ಐ.ಆರ್.ಎಲ್. ಸೇರಿದಂತೆ ಮೊತ್ತ ರೂ. 21,45,050/– ಗಳಿಗೆ (ಇಪ್ಪತ್ತೊಂದು ಲಕ್ಷದ ನಲವತ್ತೈದು ಸಾವಿರದ ಐವತ್ತು ರೂ.ಗಳು ಮಾತ್ರ) ಸರ್ಕಾರದ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2002, ದಿನಾಂಕ : 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2745

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎಸ್.ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆ– ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ ಸಿಆಸುಇ 206 ಸೇಇವಿ 07 ದಿನಾಂಕ 20–09–2010

2) ಶ್ರೀ ಎಸ್ ಆರ್ ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 05–10–2010

**ಪ್ರಸ್ತಾವನೆ:**

ಶ್ರೀ ಎಸ್.ಆರ್.ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆಲವು ಪ್ರಸ್ತಾವನೆಗಳಿಗೆ ಸಂಬಂಧಿಸಿದ ಕಡತಗಳನ್ನು ಮೇಲಾಧಿಕಾರಿಗಳ ಗಮನಕ್ಕೆ ಸಲ್ಲಿಸದೇ, ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ತಮ್ಮ ಹಂತದಲ್ಲಿಯೇ ನಿರ್ಣಯ ಕೈಗೊಂಡು ಆದೇಶಗಳನ್ನು ಹೊರಡಿಸಿ ಸಚಿವಾಲಯದ ಕೈಪಿಡಿ 2005ರ ಸೂಚನೆಗಳನ್ನು ಹಾಗೂ ಕ.ನಾ.ಸೇ. (ನಡತೆ) ನಿಯಮಗಳು 1966ರನ್ನು ಉಲ್ಲಂಘಿಸಿ, ದುರ್ನಡತೆ ಹಾಗೂ ಕರ್ತವ್ಯಲೋಪವೆಸಗಿರುವ ಆರೋಪಕ್ಕಾಗಿ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 11ರ ಅನ್ವಯ ಮೇಲೆ ಕ್ರ.ಸಂ.(1) ರಲ್ಲಿ ಓದಲಾದ ದಿನಾಂಕ: 20–09–2010ರಲ್ಲಿ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಎಸ್.ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿರವರು ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಮನವಿಯಲ್ಲಿ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಸದರಿಯವರುಗಳ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸೇಇವಿ 2007, ಬೆಂಗಳೂರು, ದಿನಾಂಕ: 09-11-2010.**

ಶ್ರೀ ಎಸ್.ಆರ್.ಶಂಕರ್, ಹಿಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ) ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗಿಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ.ಉಮೇಶ್, ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ)ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.( ಸೇವೆಗಳು-2 & 3 ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3).

ಪಿ.ಆರ್ 2807

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಸಿ.ಡಿ. ನಾಗರಾಜ್, ಪ್ರೊಪಿಎಸ್ಐ(ಸಿವಿಲ್) ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ. 117/ಸಿಬ್ಬಂದಿ-1/2008-09 ದಿನಾಂಕ 28-04-2009.

2) ಸರ್ಕಾರದ ಆದೇಶ ಸಂಖ್ಯೆ: ಒಇ 147 ಪೊಸಇ 2009 ದಿನಾಂಕ 19-06-2009.

3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ. 117/ಸಿಬ್ಬಂದಿ-1 2008-09 ದಿನಾಂಕ 15-10-2010

**ಪ್ರಸ್ತಾವನೆ:**

ಶ್ರೀ ಸಿ.ಡಿ.ನಾಗರಾಜ್, ಪ್ರೊ.ಪಿಎಸ್ಐ (ಸಿವಿಲ್) ರವರು ದಿನಾಂಕ 30-12-2001 ರಂದು ಸೇವೆಗೆ ಸೇರಿರುತ್ತಾರೆ. ಇವರ 2 1/2 ವರ್ಷಗಳ ಪರೀಕ್ಷಾರ್ಥ ಅವಧಿಯು ದಿನಾಂಕ 2-06-2004 ರಂದು ಪೂರ್ಣಗೊಂಡರೂ, ಈ ಅವಧಿಯಲ್ಲಿ ಇವರ ಅಕೌಂಟ್ಸ್ ಹೈಯರ್ ಇಲಾಖಾ ಪರೀಕ್ಷೆ ಪಾಸು ಮಾಡದೆ ಇರುವುದರಿಂದ ಮತ್ತು ಈ ಅವಧಿಯಲ್ಲಿ ಇವರ ಸೇವೆಯು ತೃಪ್ತಿಕರವಾಗಿದ್ದುದರಿಂದ, ನೇಮಕಾತಿ ಪ್ರಾಧಿಕಾರದ ಅಧಿಕಾರಕ್ಕೆ ಒಳಪಟ್ಟ ದಿನಾಂಕ 30-06-2004ರಿಂದ 29-09-2005 ರವರೆಗೆ 1 ವರ್ಷ 3 ತಿಂಗಳ ಕಾಲ ಇವರ ಪರೀಕ್ಷಾರ್ಥ ಅವಧಿಯನ್ನು ಕರ್ನಾಟಕ ಸಿವಿಲ್ ಸರ್ವೀಸ್ (ಪ್ರೊಬೇಷನ್) ನಿಯಮಗಳು 1977ರ ನಿಯಮ 4(i) (ii) ರನ್ವಯ ಐಜಿಪಿ, ಪಶ್ಚಿಮ ವಲಯ ರವರು ದಿನಾಂಕ 04-03-2009ರ ಆದೇಶದಲ್ಲಿ ವಿಸ್ತರಿಸಿರುತ್ತಾರೆ.

ನಂತರ ಸದರಿ ಪಿ.ಎಸ್.ಐ. ರವರ ಕಾರ್ಯವೈಖರಿ ತೃಪ್ತಿಕರವಾಗಿರುವುದರಿಂದ, ಇವರ ಪರೀಕ್ಷಾರ್ಥ ಅವಧಿ ದಿನಾಂಕ 30-09-2005 ರಿಂದ 08-06-2007 ರವರೆಗೆ (ಅಕೌಂಟ್ಸ್ ಹೈಯರ್ ಪರೀಕ್ಷೆ ಪಾಸಾದ ದಿನಾಂಕ 09-06-2007) ವಿಸ್ತರಿಸುವಂತೆ ಡಿಐಜಿಪಿ, ಪಶ್ಚಿಮ ವಲಯ, ಮಂಗಳೂರು ಹಾಗೂ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ. ಅದರಂತೆ ಇವರ ಖಾಯಂಪೂರ್ವ ಅವಧಿಯನ್ನು ದಿನಾಂಕ 30-09-2005 ರಿಂದ 08-06-2007 ರವರೆಗೆ (ಅಕೌಂಟ್ಸ್ ಹೈಯರ್ ಪರೀಕ್ಷೆ ಪಾಸಾದ ದಿನಾಂಕ 09-06-2007) ಕೆಸಿಎಸ್ (ಪ್ರೊಬೇಷನ್) ನಿಯಮ 1977ರ ನಿಯಮಾವಳಿ 4(1)(i) ರನ್ವಯ ಮೇಲೆ ಓದಲಾದ (2)ರ ಆದೇಶದಲ್ಲಿ ವಿಸ್ತರಿಸಲಾಗಿರುತ್ತದೆ.

ಶ್ರೀ ಸಿ.ಡಿ. ನಾಗರಾಜ್, ಪಿ.ಎಸ್.ಐ (ಸಿವಿಲ್) ರವರ ವಿರುದ್ಧ ಚಾಲ್ತಿ ಶಿಕ್ಷೆಯು ದಿನಾಂಕ 30-11-2007 ಕ್ಕೆ ಮುಗಿದಿರುವುದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ 01-12-2007ಕ್ಕೆ ಘೋಷಿಸಬೇಕಾಗಿರುತ್ತದೆ. ಆದ್ದರಿಂದ ಈಗಾಗಲೇ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 08-06-2007ಕ್ಕೆ ವಿಸ್ತರಿಸಿರುವುದರಿಂದ ತದನಂತರ ಅವಧಿ ದಿನಾಂಕ 08-06-2007 ರಿಂದ 30-11-2007 ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ; ಒಇ 345 ಪೊಸಿಇ 2010, ಬೆಂಗಳೂರು ದಿನಾಂಕ: 3-11-2010.**

ಪ್ರಸ್ತಾವನೆಯಲ್ಲಿನ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಸಿ.ಡಿ. ನಾಗರಾಜ್, ಪಿ.ಎಸ್.ಐ. (ಸಿವಿಲ್) ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 08-06-2007 ರಿಂದ 30-11-2007ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ(ಪೋಲಿಸ್ ಸೇವೆಗಳು)

ಪಿ.ಆರ್ 2808

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಮಂಜೂರು ಮಾಡಲಾಗಿರುವ 1.00 ಕೋಟಿ ಸಾಲ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿ ಪಡಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 9–12–2004ರ ಸಿಎಂಡಬ್ಲ್ಯೂ 202 ಸಸಕಾ 2004ನೇ ಸಂಖ್ಯೆಯ ಸರ್ಕಾರದ ಆದೇಶ.

**2)** ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ದಿನಾಂಕ 22–6–2010ರ ಡಿಎಸ್‌ಕೆ/ಎಫ್‌ಐಎನ್/31/2002–03ರ ಪತ್ರ.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯ ಭೂಸನೂರಿನ ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ನೌಕರರಿಗೆ ಬಾಕಿ ಇರುವ ಮೂರು ತಿಂಗಳ ವೇತನ ಪಾವತಿಗೆ 75.00 ಲಕ್ಷಗಳು ಹಾಗೂ ಕಾರ್ಖಾನೆಯ ಯಂತ್ರೋಪಕರಣಗಳ ಶುದ್ಧೀಕರಣಕ್ಕಾಗಿ 25.00 ಲಕ್ಷಗಳು ಒಟ್ಟು 100.00ಲಕ್ಷಗಳ ಆರ್ಥಿಕ ಸಹಾಯವನ್ನು ಸಾಲದ ರೂಪದಲ್ಲಿ ದಿನಾಂಕ 9–12–2004ರ ಸರ್ಕಾರದ ಆದೇಶದ ಮೂಲಕ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿರುತ್ತದೆ.

ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆಗೆ ಮಂಜೂರು ಮಾಡಲಾಗಿರುವ 100.00 ಲಕ್ಷಗಳ ಸಾಲದ ಮರುಪಾವತಿಗೆ ಸಂಬಂಧಿಸಿದಂತೆ ಮಹಾಲೇಖಪಾಲರು ನೀಡಿರುವ ಆಡಿಟ್ ವಿಚಾರಣೆ 13ರಲ್ಲಿ ಆಕ್ಷೇಪಣೆಯನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ, ಈ ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸಲು ಕ್ರಮ ಕೈಗೊಳ್ಳಬೇಕೆಂದು ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ದಿನಾಂಕ 22–6–2010ರ ಪತ್ರದಲ್ಲಿ ಕೋರಿರುತ್ತಾರೆ.

ಭೂಸನೂರಿನ ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಬಿಡುಗಡೆ ಮಾಡಿರುವ 100.00 ಲಕ್ಷಗಳ ಮರುಪಾವತಿಗೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ; ವಾಕೈ 74 ಸಸಕಾ 2010, ಬೆಂಗಳೂರು ದಿನಾಂಕ: 9–11–2010.**

ಪ್ರಸ್ತಾವನೆಯಲ್ಲಿನ ವಿವರಿಸಿರುವ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಭೂಸನೂರಿನ ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆಗೆ ದಿನಾಂಕ 9–012–2004ರ ಸರ್ಕಾರದ ಆದೇಶದ ಮೂಲಕ ಬಿಡುಗಡೆ ಮಾಡಲಾಗಿರುವ 100.000 ಲಕ್ಷಗಳ ಸಾಲದ ಮರುಪಾವತಿ ಮಾಡುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧದ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ದಿನಾಂಕ 12–10–2010ರ ಎಫ್‌ಡಿ 50 ಆರ್‌ಎಲ್‌ಜಿ 10ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿ ಮೂಲಕ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರಿ ಸಕ್ಕರೆ)

## Annexure to the G.O.No. CI 74 SaSaKa 2010 dated 9.11.2010

Essential details of Loans sanctioned vide Government Orders
No. CMW 202 SaSaKa 2004 dated 9.12.2004

LOANS AND ADVANCES BY STATE GOVERNMENT

| | |
|---|---|
| 1. Sanctioning Authority | Government of Karnataka |
| 2. Sanction (G.O. No. and date) | No. CMW 202 SaSaKa 2004 dated 9.12.2004 |
| 3. To whom sanctioned | The Aland Sahakari Sakkare karkhane Niyamitha, Bhoosnur, Gulbarga District. |
| 4. Amount Sanctioned (in words and figures) | Rs 100.00 lakhs (Rupees One hundred lakhs only) |
| 5. Sanction valid upto | Not applicable |
| 6. Purpose of the Loan | To clear employees salary dues and farmers's dues. |

| | | |
|---|---|---|
| 7. Payable in cash or adjustment | Cash/cheque | |
| 8. Plan or Non-plan | Plan | |
| 9. Head of Account to which the loan is debitable | 6860-04-101-0-08 "Aland Sahakari Sakkare Karkhane "394 (paln) Loans | |
| 10. Progressive amount of loan sanctioned to date in the financial year. | G.O. No.and date | Amount ( Rs. In lakhs) |
| | No. CMW 202 SaSaKa 2004 dated 9.12.2004 | 100.00 |
| | Total | 100.00 |
| 11. Period of Loan | 10 years from the date of issue of terms and conditions. | |
| 12. Moratorium towards repayment, if any | -Nil- | |
| 13. Date and year from which repayment is to commence | From the date of issue of terms and conditions. Interest and penal interest due to be outstanding as on issue of terms and conditions date. | |
| 14. Mode of Repayment | By Cheque or DD | |
| 15. Rate of Interest | From the date of terms and conditions and as per G.o. No. FD 01 BLA 2002, dated 10.07.2003. | |
| a) Effective(if installment received on or before due date | | |
| b) Normal rate (if installment not received on or before due date) | 13% p.a | |
| c) Penal rate of interest (on over due installment for the period of deault) | 2.5% p.a | |
| d) Mode of recovery of interest | Along with interest due and penal interest due. | |
| 16. Adjustment of over due loans,if any | -- | |
| 17. Authority who coutersigns the payee's receipt | Commissioner for Cane Development and Director of Sugar, Bangalore. | |
| 18. Authority who maintains loan ledger and watches recovery | Commissioner for Cane Development and Director of Sugar, Bangalore | |
| 19. Authority responsible for reconciliation and monitoring of loan | Commissioner for Cane Development and Director of Sugar, Bangalore | |
| 20. Authority to whom utilisation certificates are to be given | Commissioner for Cane Development and Director of Sugar, Bangalore | |
| 21. Authority who should furnish estimate of recovery of loan and interest for inclusion in the budget estimates. | Commissioner for Cane Development and Director of Sugar, Bangalore | |

(**C. SREENIVAS)**
Under Secretary to Government
Commerce & Industries Department
(Co-operative Sugar)

ಪಿ.ಆರ್ 2809

## ಸಹಕಾರ ಸಚಿವಾಲಯ

**ವಿಷಯ** : ಅಮಾನತ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಬೆಂಗಳೂರು, ಇದರ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 35 ಸಿಎಲ್‌ಎಂ 2010, ದಿನಾಂಕ: 20.03.2010.

2) ಸಹಕಾರ ಸಂಘಗಳ ನಿಬಂಧಕರು ಇವರ ಪತ್ರ ಸಂಖ್ಯೆ: ಯುಬಿಸಿ– 5/223/ಜಿಬಿಎಂ/2010–11, ದಿನಾಂಕ: 23.09.2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಅಮಾನತ್ ಸಹಕಾರ ಬ್ಯಾಂಕ್ ಲಿ., ಬೆಂಗಳೂರು ಇದರ 2008–09ನೇ ಸಾಲಿನ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ದಿನಾಂಕ:30.09.2010ರೊಳಗಾಗಿ ನಡೆಸಲು ಅನುಮತಿಯನ್ನು ನೀಡಲಾಗಿದೆ. ಬ್ಯಾಂಕಿನ 2009–10ನೇ ಸಾಲಿನ ಲೆಕ್ಕಪರಿಶೋಧನೆಯು ನಡೆಯುತ್ತಿದ್ದು, ಈ ಪ್ರಕ್ರಿಯೆಯು ಮುಗಿಯಲು ಸುಮಾರು 4–5 ತಿಂಗಳುಗಳು ಬೇಕಾಗಿರುವುದರಿಂದ ಹಾಗೂ 2008–09 ಮತ್ತು 2009–10ನೇ ಸಾಲಿನ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ಪ್ರತ್ಯೇಕವಾಗಿ ನಡೆಸಿದರೆ ಬ್ಯಾಂಕಿಗೆ ರೂ.10.00 ಲಕ್ಷಗಳಷ್ಟು ಆರ್ಥಿಕ ಹೊರೆ ಬೀಳುವುದರಿಂದ 2008–09 ರಿಂದ 2009–2010 ಮತ್ತು 2010–2011ನೇ ಸಾಲಿನ ಸರ್ವಸದಸ್ಯರ ಮಹಾಸಭೆಯನ್ನು ದಿನಾಂಕ: 30.09.2011 ರೊಳಗಾಗಿ ನಡೆಸಲು ಅನುಮತಿ ನೀಡುವಂತೆ ಬ್ಯಾಂಕಿನ ಆಡಳಿತಗಾರರು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ವರದಿ ಮಾಡುತ್ತಾ ಸದರಿ ಬ್ಯಾಂಕಿನ 2008–09 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.1.2010ರೊಳಗಾಗಿ ನಡೆಸಲು ಪರವಾನಗಿ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 178 ಸಿಎಲ್ ಎಂ 2010, ಬೆಂಗಳೂರು, ದಿನಾಂಕ: 09.11.2010**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅಮಾನತ್ ಕೋ–ಆಪರೇಟಿವ್‌ಬ್ಯಾಂಕ್ ಲಿ, ಬೆಂಗಳೂರು ಇದರ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:31.1.2010 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಬ್ಯಾಂಕಿಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

27ರ ಪ್ರಕರಣದಲ್ಲಿ:

27ನೇ ಪ್ರಕರಣ ಉಪಪ್ರಕರಣ (1)ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹದಿನೈದು ತಿಂಗಳು ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31.12.2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27 (1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 2810

**ಆರ್.ಎಸ್.ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳ ಪಾರಂಪರಿಕ ಕ್ಷೇತ್ರಗಳ ಅಭಿವೃದ್ಧಿಗಾಗಿ ಶಿವಮೊಗ್ಗದಲ್ಲಿ 'ಸಹ್ಯಾದ್ರಿ ಪಾರಂಪರಿಕ ಅಭಿವೃದ್ಧಿ ಪ್ರಾಧಿಕಾರ' ವನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :** 2010–11ನೇ ಸಾಲಿನ ಆಯವ್ಯಯದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುವ ಕಾರ್ಯಕ್ರಮ.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳ ಪಾರಂಪರಿಕ ಕ್ಷೇತ್ರಗಳ ಅಭಿವೃದ್ಧಿಗಾಗಿ ಶಿವಮೊಗ್ಗದಲ್ಲಿ 'ಸಹ್ಯಾದ್ರಿ ಪಾರಂಪರಿಕ ಅಭಿವೃದ್ಧಿ ಪ್ರಾಧಿಕಾರ' ವನ್ನು ಸ್ಥಾಪಿಸುವುದಾಗಿ ಘೋಷಿಸಿರುತ್ತಾರೆ. ಈ ಉದ್ದೇಶಕ್ಕಾಗಿ 2010–11ನೇ ಸಾಲಿನ ಆಯವ್ಯಯದಲ್ಲಿ ರೂ. 20.00 ಕೋಟಿ ಅನುದಾನವನ್ನು ನೀಡಲಾಗುವುದೆಂದು ತಿಳಿಸಿರುತ್ತಾರೆ. ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯು ಸದರಿ ಪ್ರಾಧಿಕಾರದ ಆಡಳಿತ ಇಲಾಖೆಯಾಗಿರುತ್ತದೆ. ಸದರಿ ಪ್ರಾಧಿಕಾರವನ್ನು ರಚಿಸಲು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 145 ಕೆಎಂಯು 2009, ಬೆಂಗಳೂರು, ದಿನಾಂಕ : 28ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶಿವಮೊಗ್ಗದಲ್ಲಿ 'ಸಹ್ಯಾದ್ರಿ ಪಾರಂಪರಿಕ ಅಭಿವೃದ್ಧಿ ಪ್ರಾಧಿಕಾರ' ವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿದೆ, ಈ ಬಗ್ಗೆ ಪೂರ್ಣ ರೂಪರೇಷೆಗಳನ್ನೊಳಗೊಂಡ ನಿಯಮಾವಳಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 2778

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು

ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಆರ್ಥಿಕ ಸಚಿವಾಲಯ

**ವಿಷಯ :** ದಿನಾಂಕ: 1.1.2010 ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ಆಇ 145 ರಾಲೆಪ 2010, ದಿ: 26.05.2010

2)ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂ: ಸಿಎಸ್ಎ 2 ಎಸ್ಎಂಎಸ್2001/1920(ಎ), ದಿನಾಂಕ : 27.7.2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಜ್ಯೇಷ್ಠತಾ ಪಟ್ಟಿಯನ್ನು ದಿ: 1.1.2010ರಲ್ಲಿದ್ದಂತೆ ಪ್ರಕಟಿಸಿ ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಸೂಕ್ತ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ತಿಳಿಸಲಾಗಿತ್ತು. ಅದರಂತೆ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಈ ಬಗ್ಗೆ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ನೀಡಿದ ವರದಿಯಲ್ಲಿ ಶ್ರೀ ಎ.ಲೋಕೇಶ್ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ: (3)ರಲ್ಲಿ ನಿಗದಿಪಡಿಸಿರುವ ಬಗ್ಗೆ ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಇವರಿಗೆ ಉಪ ನಿಯಂತ್ರಕರ ಹುದ್ದೆಗೆ ಕರ್ನಾಟಕ ಸಿವಿಲ್ ಸೇವೆಗಳು (ವೇತನ ಬಡ್ತಿ ಮತ್ತು ಪಿಂಚಣಿ ಕ್ರಮಬದ್ಧಗೊಳಿಸುವುದು) ನಿಯಮಗಳು 1978ರ ನಿಯಮ 2(1)(ಎ)ರನ್ವಯ ಪೂರ್ವಾನ್ವಯ ದಿನಾಂಕ: 28.7.2001 ಎಂದು ಪರಿಗಣಿಸಿ ಆದೇಶ ಹೊರಡಿಸುವವರೆಗೆ ಇವರಿಗೆ ದಿನಾಂಕ: 28.7.2001 ರಿಂದ ಜ್ಯೇಷ್ಠತೆ ನಿಗದಿಪಡಿಸಲು ಅವಕಾಶ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವರದಿಯನ್ನು ಪರಿಶೀಲಿಸಲಾಗಿದೆ.

ಶ್ರೀ ಎ.ಲೋಕೇಶ್ ಇವರನ್ನು ಕರ್ನಾಟಕ ಸಾಮಾನ್ಯ ನೇಮಕಾತಿ ನಿಯಮಾವಳಿಗಳ ನಿಯಮ 16ರನ್ವಯ ಸಾರ್ವಜನಿಕ ಹಿತದೃಷ್ಟಿಯಿಂದ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ವಿಲೀನಗೊಳಿಸಿ ಆದೇಶಿಸಿರುವುದರಿಂದ ಇವರ ಜ್ಯೇಷ್ಠತೆಯನ್ನು ಕೆ.ಸಿ.ಎಸ್. (ಜ್ಯೇಷ್ಠತಾ) ನಿಯಮಾವಳಿಯ ನಿಯಮ 6(2)ನೇ ಪರಂತುಕದನ್ವಯ ನಿರ್ಧರಿಸಬೇಕಾಗುತ್ತದೆ ಮತ್ತು ಈ ಅಧಿಕಾರಿಯು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ್ದು, ಇವರು ಹಿಂದೆ ನೇಮಕಾತಿ ಹೊಂದಿದ ದಿನಾಂಕದಿಂದ ಜ್ಯೇಷ್ಠತೆ ಪಡೆಯಲು ಅರ್ಹರಿರುತ್ತಾರೆ. ಆದ್ದರಿಂದ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ: (3)ರಲ್ಲಿ ನಿಗದಿಪಡಿಸಿರುವುದು ನಿಯಮಾನುಸಾರವಾಗಿದೆಯೆಂದು ತೀರ್ಮಾನಿಸಲಾಗಿದೆ. ಆದ್ದರಿಂದ ದಿನಾಂಕ: 1.1.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರುಗಳ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 145 ರಾಲೆಪ 2010(3) ಬೆಂಗಳೂರು, ದಿನಾಂಕ : 30ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿ: 1.1.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆ ಉಪ ನಿಯಂತ್ರಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ದಿನಾಂಕ: 01.01.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರುಗಳ ಜ್ಯೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು (ಶ್ರೀಮತಿ/ಶ್ರೀ) | ಹುಟ್ಟಿದ ದಿನಾಂಕ | ಕೆಲಸಕ್ಕೆ ಸೇರಿದ ದಿನಾಂಕ | ಹುದ್ದೆಗೆ ಧಾರಣ ಮಾಡಿದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1. | ಕಮಲಾಪುರ್‌ಕರ್ ರವಿ | 10-07-1959 | 27-11-1993 | 27-08-1999 |
| 2. | ವಿ.ಎಸ್.ಶ್ರೀಕಂಠ | 03-12-1952 | 27-04-1973 | 16-06-1999 |
| 3. | ಲೋಕೇಶ್ ಎ. | 23.02.1968 | 24.10.1996 | 28.7.2001 (ವಾಣಿಜ್ಯ & |
| | | ಕೈಗಾರಿಕೆ ಇಲಾಖೆಯಲ್ಲಿ ಉಪ ನಿರ್ದೇಶಕರ ವೃಂದಕ್ಕೆ ಬಡ್ತಿ ಹೊಂದಿದ ದಿನಾಂಕ). ಸರ್ಕಾರದ ದಿ: 7.12.2009 ಸಂಖ್ಯೆ:ಆಇ 208 ರಾಲೆಪ 2008ರ ಆದೇಶದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ವಿಲೀನಗೊಂಡು ಉಪ ನಿಯಂತ್ರಕರ ಹುದ್ದೆಗೆ ದಿ: 11.12.2009 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. | | |
| 4. | ಜಿ. ರತ್ನಮಾಲ | 26-07-1958 | 08-07-1985<br>05-04-1997 | 04-04-2002 |
| 5. | ಕೆ.ಹೆಚ್.ಜಯರಾಮಯ್ಯ | 20-07-1951 | 22-05-1973 | 13-12-2004 |
| 6. | ಎ.ಶಿವರಾಂ | 02-07-1952 | 03-09-1973 | 03-06-2005 |
| 7. | ಗುರುಲಿಂಗಪ್ಪ ಹೊಸಮನಿ | 01-08-1953 | 22-11-1981 | 01-10-2009 |
| 8. | ಟಿ.ಮಾದಯ್ಯ | 25-08-1953 | 10-05-1976 | 16-09-2009 |
| 9. | ಸಿ.ಲಕ್ಷ್ಮಿಕಾಂತ ರೆಡ್ಡಿ | 01-12-1950 | 04-08-1971<br>12-11-1974 | 26-06-2009 |
| 10. | ಎ.ಪ್ರಭಾವತಿ | 07-01-1951 | 22-09-1971<br>12-11-1974 | 29-10-2009 |
| 11. | ಮದ್ದೂರು ತಿಮ್ಮಯ್ಯ | 20-10-1951 | 28-10-1977 | 19-09-2009 |
| 12. | ಕೆ.ಆರ್.ನಾಯಕ್ | 01-06-1954 | 05-01-1984 | 22-09-2009 |

| | | | | |
|---|---|---|---|---|
| 13. | ಜಗದೀಶ್ | 07–02–1955 | 30–11–1983 | 20–10–2009 |
| 14. | ಟಿ.ಮಲ್ಲಯ್ಯ | 05–06–1955 | 14–12–1983 | 24–09–2009 |
| 15. | ಎಂ.ಪಿ.ಅನಿತಾ | 16–03–1975 | 19–07–1999 | 17–09–2009 |
| 16. | ಎಂ.ವಿ.ವಿಜಯಲಕ್ಷ್ಮಿ | 11–06–1973 | 15–07–1999 | 16–09–2009 |
| 17. | ಎಂ.ಮುನಿವೀರಪ್ಪ | 20–03–1970 | 15–07–1999 | 15–10–2009 |
| 18. | ಡಿ.ಸಿ.ಶಿವಣ್ಣಗೌಡ | 06–03–1952 | 15–04–1974 | 16–09–2009 |
| 19. | ಎಂ.ಎಸ್. ಕಲಾವತಿ | 20–01–1951 | 23–06–1973 | 23–09–2009 |
| 20. | ಎಂ.ಎಲ್.ಶಾಮಸುಂದರ್ | 05–09–1950 | 07–05–1973 | 22–09–2009 |
| 21. | ಪಿ.ರುದ್ರಪ್ಪ | 12–08–1950 | 09–02–1974 | 01–01–2010 |
| 22. | ನಂಜಯ್ಯ | 01–12–1955 | 21–02–1984 | 25–09–2009 |
| 23. | ಡಿ.ಕೆ.ಕುಲಕರ್ಣಿ | 01–06–1951 | 24–09–1973 | 23–09–2009 |
| 24. | ಎಂ.ಬಸವರಾಜು | 01–01–1953 | 03–02–1981 | 16–09–2009 |
| 25. | ಟಿ.ವೆಂಕಟರಮಣಯ್ಯ | 18–08–1955 | 20–11–1981 | 17–09–2009 |
| 26. | ಆರ್.ವಿ. ವೈದ್ಯ | 05–09–1950 | 15–04–1974 | 24–09–2009 |
| 27. | ವೈ.ಡಿ. ಉಳ್ಳಿಕಾಶಿ | 01–06–1951 | 26–11–1971 | 16–09–2009 |
| 28. | ಹೆಚ್.ಬಿ.ಹವಳಾನಾಯಕ್ | 22–03–1957 | 16–11–1976 | 14–12–2009 |
| 29. | ಯು.ಹೆಚ್.ನಾಡಗೌಡ | 01–06–1952 | 01–05–1974 | 16–09–2009 |
| 30. | ಕೆ.ನರಸಿಂಹಮೂರ್ತಿ | 01–05–1952 | 22–11–1971 | 23–09–2009 |
| 31. | ಪಿ.ಶ್ರೀನಿವಾಸರಾವ್ | 10–10–1950 | 11–04–1977 | 16–10–2009 |
| 32. | ಎಲ್.ಎಸ್.ತಮದಡ್ಡಿ | 10–01–1951 | 03–09–1975 | 08–10–2009 |
| 33. | ಬಿ.ರಾಜಾಸುರೇದ್ರ | 10–11–1951 | 06–09–1975 | 16–09–2009 |
| 34. | ಎಂ.ತ್ಯಾಗರಾಜ್ | 09–11–1954 | 14–04–1977 | 23–09–2009 |
| 35. | ಜೆ.ಎಸ್.ಶ್ರೀಕಂಠರಾವ್ | 05–06–1953 | 11–04–1977 | 25–09–2009 |
| 36. | ಹೆಚ್.ವೈ.ಯಡಿಹಳ್ಳಿ | 01–05–1955 | 12–03–1977<br>11–01–1984 | 17–09–2009 |
| 37. | ದೇವೇಂದ್ರಪ್ಪ ಜಿ.ಬಬ್ಬಿ | 02–03–1956 | 18–06–1979 | 09–10–2009 |
| 38. | ಎಲ್.ಅಂತೋಣಿರಾಜ್ | 13–08–1955 | 18–04–1984 | 16–09–2009 |
| 39. | ಡಿ.ತುಳಸೀದಾಸ್ | 30–04–1953 | 13–10–1977 | 16–09–2009 |
| 40. | ಸಿ.ದಾಸಪ್ಪ | 21–04–1951 | 25–04–1985 | 15–12–2009 |
| 41. | ಡಿ.ಕೆಂಪಯ್ಯ | 06–02–1951 | 22–05–1978 | 10–09–2009 |
| 42. | ಸಿ.ಆರ್.ಅರವಿಂದ್ | 05–03–1952 | 11–03–1977 ಅಪರಾಹ್ನ | 01–10–2009 |
| 43. | ಸಿ.ಎ.ಸಾಲೋಟಗಿ | 15–03–1953 | 16–04–1977 | 23–09–2009 |
| 44. | ಟಿ.ಆರ್.ಶಿವಪ್ರಸಾದ್ | 30–10–1955 | 04–03–1977 | 01–10–2009 |
| 45. | ಸಿ.ಜಿ.ವಸುಂದರದೇವಿ | 02–08–1956 | 01–04–1977 | 24–09–2009 |
| 46. | ಎ.ಎಂ.ಶ್ರೀನಿವಾಸ | 22–05–1955 | 28–10–1977 | 21–10–2009 |
| 47. | ಎಲ್.ಕರಿಯಪ್ಪ | 12–08–1951 | 06–06–1975 | 17–09–2009 |
| 48. | ಜಯಶಂಕರ | 10–08–1954 | 24–04–1985 | 16–09–2009 |
| 49. | ಕನಕರಾಜ ಡಿ | 15–06–1972 | 03–05–2006 | 26–10–2009 |
| 50. | ರಘು ಜಿ.ಪಿ | 02–10–1970 | 29–04–2006 | 16–10–2009 |

**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 2579 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕಿನ ಹೆಮ್ಮಿಗೆ, ಕಡೆಮನುಗನಹಳ್ಳಿ ಮತ್ತು ಮುದಗನೂರು ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ (ಪ್ಯಾಕೇಜ್ ನಂ. 2)ರ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ** :
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಸಿಇಆರ್ ಸಂಖ್ಯೆ: 70/2010–11, ಸಿಇಆರ್ ಸಂಖ್ಯೆ: 69/2010–11 ಹಾಗೂ ಸಿಇಆರ್ ಸಂಖ್ಯೆ: 71/2010–11, ದಿನಾಂಕ 3–07–2010.
2) ದಿನಾಂಕ 02–09–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸ(ದ)/ತಾಂ.2/ಸಇಂ.4/ಮೈಸೂರು/ಇ–ಟೆಂಡರ್/2010–11/2637.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 19–10–2010ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/2307.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರ ಆದೇಶದಲ್ಲಿ ಭಾರತ ಸರಕಾರದ ನೆರವಿನ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ (ಆರ್.ಆರ್.ಆರ್.) ಯೋಜನೆಯಡಿ ಅನುಮೋದನೆಯಾಗಿರುವ ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಹೆಮ್ಮಿಗೆ ಕೆರೆ ಅಭಿವೃದ್ಧಿ ರೂ. 71.00 ಲಕ್ಷ ಕಡೆಮನುಗನಹಳ್ಳಿ ಕೆರೆ ಅಭಿವೃದ್ಧಿ ರೂ. 70.00 ಲಕ್ಷ ಹಾಗೂ ಮುದಗನೂರು ಕೆರೆ ಅಭಿವೃದ್ಧಿ ರೂ. 72.00 ಲಕ್ಷ ಮೊತ್ತದ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ

ಈ ಕಾಮಗಾರಿಗಳನ್ನು ಒಟ್ಟುಗೂಡಿಸಿ ಪ್ಯಾಕೇಜ್ ಮಾಡಿ ಮೈಸೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಇ–ಪ್ರೊಕ್ಯೂರ್‌ಮೆಂಟ್ ಅಂತರ್ಜಾಲ | 30–07–2010 |
| 2 | ಜಿಲ್ಲಾ ಟೆಂಡರ್ ಬುಲೆಟಿನ್ | 17–07–2010 |
| 3 | ರಾಜ್ಯ ಟೆಂಡರ್ ಬುಲೆಟಿನ್ | 08–07–2010 |
| 4 | ಟೈಮ್ಸ್ ಆಫ್ ಇಂಡಿಯಾ ದಿನ ಪತ್ರಿಕೆ | 08–07–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 5 ಜನ ಗುತ್ತಿಗೆದಾರರು ಇ–ಪ್ರೊಕ್ಯೂರ್‌ಮೆಂಟ್ ವೆಬ್‌ಸೈಟ್ ಮೂಲಕ ಟೆಂಡರ್ ಭರ್ತಿ ಮಾಡಿ ನಿಗದಿತ ಸಮಯದಲ್ಲಿ ಸಲ್ಲಿಸಿರುತ್ತಾರೆ. ದಿನಾಂಕ 10–08–2010ರಲ್ಲಿ ತಾಂತ್ರಿಕ ಬಿಡ್‌ಗಳನ್ನು ತೆರೆಯಲಾಗಿದ್ದು ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 21–08–2010ರಂದು ತೆರೆಯಲಾಗಿದೆ. ಅವರ ಟೆಂಡರ್ ವಿವರ ಕೆಳಕಂಡಂತಿವೆ :

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,71,97,833/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 1,82,14,326/– | 5.91 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.91 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನ ಮಾಡಿ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 02–09–10ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 27–09–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,71,97,833–00 ಗಳ ಮೇಲೆ ಶೇಕಡ 5.90 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,82,12,505–00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 48 ಕೆಜಿದು 2010, ಬೆಂಗಳೂರು, ದಿನಾಂಕ: 29–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕಿನ ಹೆಮ್ಮಿಗೆ, ಕಡೆಮನುಗನಹಳ್ಳಿ ಮತ್ತು ಮುದಗನೂರು ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ (ಪ್ಯಾಕೇಜ್ ನಂ. 2)ರ ಕಾಮಗಾರಿಗಳ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,71,97,833–00ಗಳ ಮೇಲೆ ಶೇ. 5.90 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,82,12,505–00 ಗಳಿಗೆ (ಒಂದು ಕೋಟಿ ಎಂಬತ್ತೆರಡು ಲಕ್ಷದ ಹನ್ನೆರಡು ಸಾವಿರದ ಐದುನೂರ ಐದು ರೂ.ಗಳು ಮಾತ್ರ) ಶ್ರೀ ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. ನಂ. 2746

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ದಕ್ಷಿಣ ಕನ್ನಡ ಜಿಲ್ಲೆ, ಸೂಳ್ಯ ತಾಲ್ಲೂಕಿನ ಸುಬ್ರಹ್ಮಣ್ಯದಲ್ಲಿ ಕುಮಾರಧಾರ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ** : 1) ದಿನಾಂಕ 28-02-2009ರ ಸರ್ಕಾರದ ಆದೇಶ ಸಂಖ್ಯೆ : ಸನೀಇ 14 ಮಸಾವಿ 2009 (1)

2) ದಿನಾಂಕ 21-09-2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಸ.5/ಸಇಂ.11/ ದ.ಕ.ಜಿ./ ಸು.ತಾ/ ಕುಮಾರಧಾರ/ಇಪ್ರೊಕ್ಯೂರ್‌ಮೆಂಟ್/ಟೆಂಡರ್ ಅನುಮೋದನೆ/2010/2738.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 19-10-2010ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09-10/2307.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 4702-ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಅಡಿಯಲ್ಲಿ ರೂ. 150.00 ಲಕ್ಷ ಮೊತ್ತದ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಮೊದಲನೆ ಬಾರಿ ಕರೆದ ಟೆಂಡರ್ ಕರೆಗೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ ಎರಡನೆಯ ಬಾರಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | 28-06-2010 |
| 2 | ರಾಜ್ಯ ಟೆಂಡರ್ ಬುಲೆಟಿನ್ | 26-06-2010 |
| 3 | ಕನ್ನಡ ಪ್ರಭ ದಿನ ಪತ್ರಿಕೆ | 29-06-2010 |
| 4 | ಹೊಸದಿಗಂತ ದಿನ ಪತ್ರಿಕೆ | 29-06-2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 2 ಜನ ಗುತ್ತಿಗೆದಾರರು ಇ-ಪ್ರೊಕ್ಯೂರ್‌ಮೆಂಟ್ ವೆಬ್‌ಸೈಟ್ ಮೂಲಕ ಟೆಂಡರ್ ಭರ್ತಿ ಮಾಡಿ ನಿಗದಿತ ಸಮಯದಲ್ಲಿ ಸಲ್ಲಿಸಿರುತ್ತಾರೆ. ದಿನಾಂಕ 10-08-2010ರಂದು ತಾಂತ್ರಿಕ ಬಿಡ್‌ಗಳನ್ನು ತೆರೆಯಲಾಗಿದ್ದು ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 26-08-2010ರಂದು ತೆರೆಯಲಾಗಿದೆ. ಅವರ ಟೆಂಡರ್ ವಿವರ ಕೆಳಕಂಡಂತಿವೆ :

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,49,28,871/- |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಸುಭಾಷ್ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | ರೂ. 1,70,86,148/- | 14.45 ಹೆಚ್ಚು |

ಮೇಲ್ಕಂಡಂತೆ ಶ್ರೀ ಸುಭಾಷ್ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.45 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನ ಮಾಡಿ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 21-09-10ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 27-09-2010 ರಂದು ಇಲಾಖಾ ಟೆಂಡರ್ ಪರಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,49,28,871-00 ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,70,18,913-00 ಗಳಿಗೆ ಕಾಮಗಾರಿಯನ್ನು ಶ್ರೀ ಸುಭಾಷ್ಚಂದ್ರ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 33 ಅಪಿಬಂ 2010, ಬೆಂಗಳೂರು, ದಿನಾಂಕ: 29-10-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಸೂಳ್ಯ ತಾಲ್ಲೂಕಿನ ಸುಬ್ರಹ್ಮಣ್ಯದಲ್ಲಿ ಕುಮಾರಧಾರ ನದಿಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,49,28,871-00ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,70,18,913-00 ಗಳಿಗೆ (ಒಂದು ಕೋಟಿ, ಎಪ್ಪತ್ತು ಲಕ್ಷದ, ಹದಿನೆಂಟು ಸಾವಿರದ, ಒಂಬೈನೂರ ಹದಿಮೂರು ರೂ.ಗಳು ಮಾತ್ರ) ಶ್ರೀ ಸುಭಾಷ್ಚಂದ್ರ ಶೆಟ್ಟಿ,, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2747 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ರಾಮೇಶ್ವರ ಕೆರೆ ಮತ್ತು ಬಾಳೆಹಳ್ಳಿ ಕರಿಯಪ್ಪನಗೌಡನ ಕೆರೆ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ** :
1) ದಿನಾಂಕ 19–05–2010ರ ಸರ್ಕಾರದ ಆದೇಶ ಸಂಖ್ಯೆ : ಸನೀಇ 26 ಕೆಜಿದು 2010 (5)
2) ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ಮೈಸೂರುರವರು ಎಸ್.ಸಿ.ಇ.ಆರ್. ಸಂಖ್ಯೆ: 1/2010–11.
3) ದಿನಾಂಕ 23–09–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಮುಸ(ದ)/ತಾಂ.2/ಸಇಂ.2/ಚಿಕ್ಕಮಗಳೂರು/ ರಾಮೇಶ್ವರ/ಕರಿಯಪ್ಪಗೌಡನಕೆರೆ/ಇ–ಟೆಂಡರ್/ 2010/ 2780.
4) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 19–10–2010ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/2307.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಭಾರತ ಸರಕಾರದ ನೆರವಿನ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ (ಆರ್.ಆರ್.ಆರ್.) ಯೋಜನೆಯಡಿ ಅನುಮೋದನೆಯಾಗಿರುವ ಚಿಕ್ಕಮಗಳೂರು ತಾಲ್ಲೂಕು, ರಾಮೇಶ್ವರ ಕೆರೆ ಅಭಿವೃದ್ಧಿ ಕಾಮಗಾರಿಯ ರೂ. 218.00 ಲಕ್ಷ ಮೊತ್ತದ ಅಂದಾಜಿಗೆ ಹಾಗೂ ಉಲ್ಲೇಖ(2)ರ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ಮೈಸೂರುರವರು ರವರ ಆದೇಶದಲ್ಲಿ ಬಾಳೆಹಳ್ಳಿ ಕರಿಯಪ್ಪನಗೌಡನ ಕೆರೆ ಅಭಿವೃದ್ಧಿ ಕಾಮಗಾರಿಯ ರೂ. 28.00 ಲಕ್ಷ ಮೊತ್ತದ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಒಟ್ಟುಗೂಡಿಸಿ ಪ್ಯಾಕೇಜ್ ಮಾಡಿ ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 05–07–2010 |
| 2 | ರಾಜ್ಯ ಟೆಂಡರ್ ಬುಲೆಟಿನ್ | 07–07–2010 |
| 3 | ವಿಜಯ ಕರ್ನಾಟಕ ದಿನ ಪತ್ರಿಕೆ | 08–07–2010 |
| 4 | ಪ್ರಜಾವಾಣಿ ದಿನ ಪತ್ರಿಕೆ | 08–07–2010 |
| 5 | ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 08–07–2010 |

ಅನಿವಾರ್ಯ ಕಾರಣಗಳಿಂದ ಟೆಂಡರ್ ಪ್ರಕಟಣೆಯನ್ನು ಮುಂದೂಡಲಾಗಿದೆ.

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 2 ಜನ ಗುತ್ತಿಗೆದಾರರು ಇ–ಪ್ರೊಕ್ಯೂರ್‌ಮೆಂಟ್ ವೆಬ್‌ಸೈಟ್ ಮೂಲಕ ಟೆಂಡರ್ ಭರ್ತಿ ಮಾಡಿ ನಿಗದಿತ ಸಮಯದಲ್ಲಿ ಸಲ್ಲಿಸಿರುತ್ತಾರೆ. ದಿನಾಂಕ 20–08–2010ರಂದು ತಾಂತ್ರಿಕ ಬಿಡ್‌ಗಳನ್ನು ತೆರೆಯಲಾಗಿದ್ದು ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 31–08–2010ರಂದು ತೆರೆಯಲಾಗಿದೆ. ಅವರ ಟೆಂಡರ್ ವಿವರ ಕೆಳಕಂಡಂತಿವೆ :

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,91,51,469/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 2,18,31,054/– | 13.99 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.99 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನ ಮಾಡಿ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 23–09–10ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 27–09–2010 ರಂದು ಇಲಾಖಾ ಟೆಂಡರ್ ಪರಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,91,51,469–00 ಗಳ ಮೇಲೆ ಶೇಕಡ 11.10 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,12,77,282–00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 4ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 58 ಕೆಜಿದು 2010, ಬೆಂಗಳೂರು, ದಿನಾಂಕ: 29–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ರಾಮೇಶ್ವರ ಕೆರೆ ಮತ್ತು ಬಾಳೆಹಳ್ಳಿ ಕರಿಯಪ್ಪನಗೌಡನ ಕೆರೆ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,91,51,469–00ಗಳ ಮೇಲೆ ಶೇ. 11.10 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,12,77,282–00 ಗಳಿಗೆ (ಎರಡು ಕೋಟಿ, ಹನ್ನೆರಡು ಲಕ್ಷದ, ಎಪ್ಪತ್ತೇಳು ಸಾವಿರದ, ಇನ್ನೂರ ಎಂಬತ್ತೆರಡು ರೂ.ಗಳು ಮಾತ್ರ) ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. ನಂ. 2748

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಲಿಂಗಸೂಗೂರು (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2010–11/3322, ದಿನಾಂಕ 07–06–10,

***

**ಪ್ರಸ್ತಾವನೆ :**

ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗುಡಿಹಾಳ ಗ್ರಾಮದ ಜಮೀನುಗಳಿಗೆ ಲಿಂಗಸಗೂರ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಎಲ್.ಐ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ರೂ. 12,12,758–00 ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 07–06–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 06–01–2005ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 22–11–2006ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಲಿಂಗಸಗೂರು ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ)ದಲ್ಲಿ ಕೆಳಕಂಡ ಎಲ್.ಎ.ಸಿ. ಪ್ರಕರಣಗಳನ್ನು ಸಲ್ಲಿಸಿದ್ದಾರೆ. ಸಿವಿಲ್ ನ್ಯಾಯಾಲಯವು ದಿನಾಂಕ 08–04–2009ರಂದು ನೀಡಿರುವ ಆದೇಶದಲ್ಲಿ ಹೆಚ್ಚಿನ ಪರಿಹಾರಧನ ನಿಗಧಿಪಡಿಸಿದೆ. ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರ. ಸಂ. | ಎಲ್‌ಎಸಿ | ಗುಡಿಹಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 23/07 | 166 | 2–00 | 208695 |

| | | | | |
|---|---|---|---|---|
| 2 | 24/07 | 165 | 2–30 | 286841 |
| 3 | 25/07 | 169 | 1–34 | 279172 |
| 4 | 26/07 | 167 | 0–30 | 113356 |
| 5 | 27/07 | 111 | 1–34 | 279172 |
| 6 | 29/07 | 155 | 0–12 | 45522 |
| | | | ಒಟ್ಟು | **1212758** |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 1815 ಎಲ್‌ಎಸಿ(ಎಲ್‌ಸಿ) 2009, ದಿನಾಂಕ 23–05–09ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 82 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 30–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗುಡಿಹಾಳ ಗ್ರಾಮದ ಜಮೀನುಗಳಿಗೆ ಲಿಂಗಸೂಗೂರು ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಸಂಖ್ಯೆ 23, 24,25,26,27 ಮತ್ತು 29/07ರಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ರೂ. 12,12,758–00ಗಳನ್ನು (ಹನ್ನೆರಡು ಲಕ್ಷದ ಹನ್ನೆರಡು ಸಾವಿರದ ಏಳುನೂರ ಐವತ್ತೆಂಟು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ, ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2749 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಹಾಸನ ಜಿಲ್ಲೆ, ಬೇಲೂರು ತಾಲ್ಲೂಕಿನ ಅಡಗೂರು ಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ** : 1) ದಿನಾಂಕ 19–02–2010ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ಕೆಜಿದು 2010

2) ದಿನಾಂಕ 23–09–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಂಸ.2/ಸಇ.5/ಅಡಗೂರು/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/2010/2779.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 19–10–2010ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/2307.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 4702–ಪ್ರಧಾನ ಕಾಮಗಾರಿಗಳು ಲೆಕ್ಕ ಶೀರ್ಷಿಕೆ ಅಡಿಯಲ್ಲಿ ರೂ. 288.30 ಲಕ್ಷ ಮೊತ್ತದ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 14–06–2010 |
| 2 | ರಾಜ್ಯ ಟೆಂಡರ್ ಬುಲೆಟಿನ್ | 17–06–2010 |
| 3 | ಉದಯವಾಣಿ ದಿನಪತ್ರಿಕೆ | 14–06–2010 |
| 4 | ಪ್ರಜಾವಾಣಿ ದಿನಪತ್ರಿಕೆ | 13–06–2010 |
| 5 | ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆ | 12–06–2010 |

ಅನಿವಾರ್ಯ ಕಾರಣಗಳಿಂದ ಟೆಂಡರ್ ಪ್ರಕಟಣೆಯನ್ನು ಮುಂದೂಡಲಾಗಿದೆ

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 4 ಜನ ಗುತ್ತಿಗೆದಾರರು ಇ–ಪ್ರೊಕ್ಯೂರ್‌ಮೆಂಟ್ ವೆಬ್‌ಸೈಟ್ ಮೂಲಕ ಡೌನ್ ಲೋಡ್ ಮಾಡಿಕೊಂಡು ಇವರಲ್ಲಿ 3ಜನ ಗುತ್ತಿಗೆದಾರರು ಟೆಂಡರ್ ಭರ್ತಿ ಮಾಡಿ ನಿಗದಿತ ಸಮಯದಲ್ಲಿ ಸಲ್ಲಿಸಿರುತ್ತಾರೆ. ದಿನಾಂಕ 4–8–2010ರಂದು ತಾಂತ್ರಿಕ ಬಿಡ್‌ಗಳನ್ನು ಕರೆಯಲಾಗಿದ್ದು. ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 28–08–2010ರಂದು ತೆರೆಯಲಾಗಿದೆ. ಅವರ ಟೆಂಡರ್ ವಿವರ ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,81,60,273 |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|
| 1 | ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 3,10,69,615/– | 10.33 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.33ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನ ಮಾಡಿ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 23–09–2010ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 27–09–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,81,60,273–00 ಗಳ ಮೇಲೆ ಶೇಕಡ 10.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,09,76,300–00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 57 ಕೆಜಿದು 2010, ಬೆಂಗಳೂರು, ದಿನಾಂಕ: 29–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕಿನ ಅಡಗೂರು ಕೆರೆಯ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 2,81,60,273–00 ಗಳ ಮೇಲೆ ಶೇಕಡ 10.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,09,76,300–00 ಗಳಿಗೆ (ಮೂರು ಕೋಟಿ ಒಂಬತ್ತು ಲಕ್ಷದ ಎಪ್ಪತ್ತಾರು ಸಾವಿರದ ಮುನ್ನೂರು ರೂ.ಗಳು ಮಾತ್ರ) ಶ್ರೀ ಎಸ್. ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಸಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2750

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)